ಸಾಹಿತ್ಯ ಮಾಲಿಕೆ : ೬

# ವಿಜಯದಾಸರ ಹಾಡುಗಳು

[ ಕವಿಪರಿಚಯ, ಅರ್ಥಕೋಶ, ಟಿಪ್ಪಣಿ ಸಹಿತ ]

ಸಂಪಾದಕರು :

ಕಾ ವ್ಯ ಪ್ರೇ ಮಿ




ಸಹಸಂಪಾದಕರು :

ಚಿದಂಬರ [illegible]ಸುದಾರ, ಬಿ. ಎ.

ವ್ಹಿ. [illegible]. ಬೇಗೂರ



ಸಮಾಜ ಪುಸ್ತಕಾಲಯ, ಧಾರವಾಡ.

ಪ್ರಕಾಶಕರು .
ಸಮಾಜ ಪುಸ್ತಕಾಲಯ,
ಧಾರವಾಡ-೧



ಪ್ರಥಮ ಮುದ್ರಣ : ೧೯೭೭

ಬೆಲೆ : ರೂ. ೫-೦೦

ಮುದ್ರಕರು :
ಪ್ರತಿಭಾ ಮುದ್ರಣ
ಧಾರವಾಡ-೫೮೦೦೦೧

## ದಾಸಸಾಹಿತ್ಯ ಮಾಲಿಕೆ

ಕನ್ನಡದ ವೇದೋಪನಿಷತ್ತುಗಳಂತಿರುವ ದಾಸಸಾಹಿತ್ಯ ಒಂದು ಅಮೌಲ್ಯನಿಧಿ. ನಶಿಸಿ ಹೋಗುತ್ತಿರುವ ಈ ನಿಧಿಯನ್ನು ಅನೇಕ ಮಹನೀಯರು, ಸಂಘ ಸಂಸ್ಥೆಗಳವರು ಉಳಿಸಿಕೊಂಡು ಬಂದಿದ್ದಾರೆ.

ಈಗ ಮತ್ತೆ ಅನೇಕ ದಾಸರ ಕೃತಿಗಳು ಅಲಭ್ಯವಾಗಿವೆ. ಇದನ್ನು ಅನುಲಕ್ಷಿಸಿ ಮಹತ್ತ್ವದ ಎಲ್ಲ ದಾಸರ ಕೃತಿಗಳನ್ನು ಸಮರ್ಪಕವಾಗಿ ಸಂಪಾದಿಸಿ, ದಾಸಸಾಹಿತ್ಯದ ಪ್ರೇಮಿಗಳಿಗೂ, ಅಭ್ಯಾಸಿಗಳಿಗೂ ನೀಡುವ ಉದ್ದೇಶದಿಂದ ಈ ಮಾಲಿಕೆಯನ್ನು ಆರಂಭಿಸಿದ್ದೇವೆ.

ಹಾಡುಗಳಿಗೆ ಪರಂಪರಾಗತ ರಾಗ-ತಾಳಗಳೊಡನೆ, ಉತ್ತರಾದಿ ಸಂಗೀತದ ರಾಗ-ತಾಳಗಳನ್ನೂ ನಾವೀಗ ಜೋಡಿಸಿರುವುದರಿಂದ, ಸೂಕ್ತ ಟಿಪ್ಪಣಿ, ಶಬ್ದಾರ್ಥ, ದಾಸಸಾಹಿತ್ಯದ ಸಮಗ್ರ ಅವಲೋಕನ ಹಾಗು ಪ್ರಸ್ತುತ ಹಾಡುಗಳನ್ನು ರಚಿಸಿದ ದಾಸಕವಿಯ ಜೀವನ ಹಾಗೂ ಕೃತಿಪರಿಚಯ ಇವುಗಳನ್ನು ಒದಗಿಸಿರುವುದರಿಂದ, ನಮ್ಮ ಈ ಸಂಗ್ರಹಗಳು ಸಹೃದಯರಿಗೆ ಅತ್ಯಂತ ಉಪಯುಕ್ತವೆನಿಸುವುದರಲ್ಲಿ ಸಂದೇಹವಿಲ್ಲ. ರಸಿಕರು ಮೆಚ್ಚಿದರೆ ಅದುವೇ ನಮ್ಮ ಭಾಗ್ಯ.

— ಸಂಪಾದಕ

Paper used for printing this book was made available by the Government of India, at concessional rate.

# ಪ ರಿ ವಿ ಡಿ


| | | ಪುಟ |
|---|---|---|
| | ದಾಸಸಾಹಿತ್ಯ ಸಮೀಕ್ಷೆ | 1 |
| | ವಿಜಯದಾಸರ ಜೀವನ ಪರಿಚಯ | 17 |
| ೧ | ಪ್ರಾರ್ಥನೆ | ೨ |
| ೨ | ದೇವತಾಸ್ತುತಿ | ೧೬ |
| ೩ | ಸ್ಮರಣೆ | ೩೦ |
| ೪ | ಅಂತರಂಗ ನಿವೇದನೆ-ಆತ್ಮಬೋಧೆ | ೪೪ |
| ೫ | ಭಕ್ತಿಭಾವ | ೬೪ |
| ೬ | ಕೃಷ್ಣಲೀಲೆ | ೯೦ |
| ೭ | ಲೋಕನೀತಿ | ೯೮ |
| ೮ | ಸುಳಾದಿ-ಉಗಾಭೋಗ | ೧೧೪ |
| ೯ | ವಿಶೇಷಕೃತಿಗಳು : | |
| | ಶೋಭಾನೆ ಹಾಡು | ೧೬೪ |
| | ಉರುಟಣೆ ಹಾಡು | ೧೬೬ |
| | ಶ್ರೀಕ್ಷೇತ್ರ ಉಡುಪಿಯ ವರ್ಣನೆ | ೧೭೦ |
| | ಆರತಿಪದ | ೧೭೧ |

## ದಾಸಸಾಹಿತ್ಯ ಮಾಲಿಕೆಯ ಗ್ರಂಥಗಳು



ಕನಕದಾಸರ ಹಾಡುಗಳು

ಪುರಂದರದಾಸರ ಹಾಡುಗಳು

ಜಗನ್ನಾಥದಾಸರ ಹಾಡುಗಳು

ಗೋಪಾಲದಾಸರ ಹಾಡುಗಳು

ಪ್ರಸನ್ನವೆಂಕಟದಾಸರ ಹಾಡುಗಳು

ವಾದಿರಾಜರ ಹಾಡುಗಳು

ವಿಜಯದಾಸರ ಹಾಡುಗಳು

**ಅಚ್ಚಿನಲ್ಲಿ**

ಶ್ರೀಪಾದರಾಜರ ಹಾಡುಗಳು

ವ್ಯಾಸರಾಯರ ಹಾಡುಗಳು

ಮಹಿಪತಿದಾಸರ ಹಾಡುಗಳು

ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು

# ಅ ಕಾ ರಾ ದಿ


| | ಪುಟ |
|---|---|
| ಅಂತರಂಗದ ಕದವು ತೆರೆಯಿತಿಂದು | ೪೯ |
| ಅಡಿಗಳಿಗೊಂದಿಪೆ ಪುರಂದರ ಗುರುವೆ | ೩೮ |
| ಅಣುಮೂರುತಿ ಪರಮಾಣುಮೂರುತಿ (ಸು) | ೧೧೪ |
| ಅನ್ನದಾನ ಪ್ರಧಾನ ನಿಧಾನಿಸಿ ನೋಡಲು (ಸು) | ೧೩೪ |
| ಅರ್ಚನೆಯ ಬಗೆ ಕೇಳಿ ಲೋಕ | ೧೦೦ |
| ಆನಂದಾ ಆನಂದಾ ಮತ್ತೆ ಪರಮಾನಂದಾ | ೬೫ |
| ಆಯುವೃದ್ಧಿ ಆಗುವುದು ಯಶಸ್ಸು ಬರುವುದು (ಸು) | ೧೩೯ |
| ಆರೀಗ ನೀ ಎನ್ನ ಕಣ್ಣು ಮುಚ್ಚಿದೆಯೊ | ೯೫ |
| ಆರೇನು ಮಾಡುವರು ಅವನಿಯೊಳಗೆ | ೯೮ |
| ಇದೇ ಸಮಯ ಹರಿಯೆ ಇದೇ ಸಮಯ | ೪೬ |
| ಇರಬಾರದೊ ಬಡವ ಜಗತ್ತಿನೊಳಗೆ | ೪೮ |
| ಈತನೀಗ ಭಾರತೀಶನು ತನ್ನ ಪ್ರೀತಿಸುವರ | ೩೧ |
| ಈ ಭಾಗ್ಯವೇ ಸಾಕು ಇಹದಲ್ಲಿ ಇದ್ದನಿತು (ಸು) | ೧೨೪ |
| ಈಶಾ ಕೈಲಾಸವಾಸಾ | ೩ |
| ಈ ಸೊಬಗು ಇನ್ನಾವ ಕ್ಷೇತ್ರದಲಿ ಕಾಣೆ (ವಿ. ಕೃ.) | ೧೭೦ |
| ಉದ್ಧರಿಸುವುದೆನ್ನ ಉದಧಿಶಯನಾ | ೧೧ |
| ಉಮಾ ಕಾತ್ಯಾಯನೀ ಗೌರಿ ದಾಕ್ಷಾಯಣಿ | ೭ |
| ಊಟವನು ಮಾಡು ಬಾ ಉದಧಿಶಯನ | ೯೧ |
| ಎಂತು ವರ್ಣಿಪೆನಮ್ಮ ಮ್ಮಾ | ೨೫ |
| ಎಂದಿಗಾಹುದೋ ನಿನ್ನ ದರುಶನ | ೮೧ |
| ಎಚ್ಚತ್ತು ಇರು ಕಂಡ್ಯ ಮನವೆ | ೫೩ |
| ಎಲೆ ಮನ ಮುರಾರಿಯನು ಕೊಂಡಾಡು | ೪೦ |
| ಎಲ್ಲಡಗಿದನೊ ಹರಿ ಎನ್ನಯ ಧೊರಿ | ೧೬ |
| ಎಲ್ಲಿದ್ದರೇನು ಶ್ರೀಹರಿಗಲ್ಲದವನು | ೭೫ |
| ಏಳು ಬೆಳಗಾಯಿತು ಯದುಕುಲೋತ್ತಮ | ೧೦ |
| ಒಲಿದವಳ ಬಿಡುವದು ಧರ್ಮವಲ್ಲ | ೯೪ |
| ಕರುಣಿಸೋ ಕೃಷ್ಣ ಕರುಣಿಸೊ | ೧೭ |
| ಕಾಯೆ ಕರುಣಾಂಬುಧಿಯೆ ಇಂದಿರಾದೇವಿ | ೨೦ |

ಕೂಗಿದರು ಧ್ವನಿ ಕೇಳದೆ ೮೪
ಕೃಷ್ಣಾರ್ಪಿತವೆಂದು ಕೊಡಲು ೨೭
ಕೊಡುವವನು ನೀನು ಕೊಂಬುವನು ನಾನು ೬೯
ಗುರು ಪುರಂದರದಾಸರೆ ನಿಮ್ಮ ಚರಣಸರಸಿಜ ನಂಬಿದೆ ೩೨
ಗುರುಭಕ್ತಿ ಪ್ರಧಾನ ಸಾಧನವೊ ನಿತ್ಯ (ಸು) ೧೭೬
ಗುರುವಂಶಕೆ ನಮೋ ಎಂಬೆ ನಮ್ಮ ೩೦
ಗೋಪಿದೇವಿ ಎಂತು ಪೇಳಲಿ ೯೦
ಜಗವೆಲ್ಲ ವ್ಯಾಪಿಸಿದ ಬಲು ಅತೀಂದ್ರಿಯ ಪಾದ (ಸು) ೧೪೯
ಜಯಜಯ ಮೂಷಕ ಗಮನಾ ೭
ಜಯಮಂಗಳಂ ನಿತ್ಯ ಶುಭಮಂಗಳಂ (ವಿ. ಕೃ.) ೧೨೧
ಟೀಕಾಚಾರ್ಯರ ಪಾದ ಸೋಕಿದ ಕೊನೆಧೂಳಿ ೩೬
ಡಂಗುರ ಹೊಯಿಸಿದ ಯಮನು ೧೦೫
ಡೀಡೀ ಆಡೋಣೆ ರಂಗ ೯೩
ದಯಮಾಡು ದಯಮಾಡು ಎನ್ನಮೇಲೆ ೬೯
ದಾಸ ದಾಸ ದಾಸರ ದಾಸ್ಯವ ಕೊಡೊ ೮೭
ದಾಸ ಪುರಂದರನ ಪಾದವನ್ನು ಪೊಂದಿದೆನೊ (ಸು) ೧೪೨
ದೂರ ನೋಡುವರೆ ರಂಗಯ್ಯ ಎನ್ನ ೪೨
ನಂಬಿದೆ ನಿನ್ನ ನೀರಜ ಪಾದ ೮೫
ನದಿಯೊಳಗೊಂದು ಅಸ್ತಿಯ ಹಾಕಿ (ಸು) ೧೭೮
ನಾಡದೈವಗಳ ಪೂಜೆಯನು ಮಾಡಿದರೆ ೧೦೪
ನಾನಲ್ಲ ನನ್ನದಲ್ಲ ನಾನಾ ಕ್ರಿಯ ಕರ್ಮಗಳು (ಸು) ೧೪೭
ನಿನ್ನ ಚಿತ್ತಕೆ ಬಂದುದನು ಮಾಡು ಸರ್ವೇಶ ೨೬
ನಿನ್ನ ದರುಶನಕೆ ಬಂದವನಲ್ಲವೋ ೬೨
ನಿನ್ನ ಮರೆದೆನೊ ರಂಗ ೫೨
ನೆಚ್ಚಬೇಡಿ ಪತಿತನಾರಿಯ ೧೦೭
ನೋಡುನೋಡು ಗರುಡ ಗಮನನನೆ ೧೮
ಪಂಪಾಪುರಾಧೀಶ ಶ್ರೀವಿರೂಪಾಕ್ಷ ೪
ಪತಿತನ್ನ ಪಾವನ ಮಾಡುವ ರಂಗ ೬೯

| | |
|---|---|
| ಪತಿತಪಾವನ ನಾಮ ಪೂರ್ಣಕಾಮಾ | ೨೪ |
| ಪರದೇಶಿ ನೀನು ಸ್ವದೇಶಿ ನಾನು | ೮೪ |
| ಪರಮ ಮಂಗಳ ಮೂರುತಿ ದಿವ್ಯಕೀರುತಿ | ೭೯ |
| ಪರಮಯೋಗಿಯ ನೋಡಿರೊ ನೀವೆಲ್ಲರು | ೭೩ |
| ಪ್ರಥಮ ದೈವವೇ ಪಂಢರಿರೇಯ | ೩೧ |
| ಬಂದು ನಿಲ್ಲೊ ದಯಾನಿಧೆ | ೬೫ |
| ಬಾರೋ ಮನೆಗೆ ಬಾರೋ ವೆಂಕಟರಮಣ | ೩೪ |
| ಬಿಡುಬಿಡು ಮಾಯವನು | ೧೧೦ |
| ಬೆಳಗು ಜಾವದಿ ಬಾರೊ ಹರಿಯೆ | ೧೩ |
| ಭಕುತಿ ಸುಖವೊ ರಂಗ ಮುಕುತಿ ಸುಖವೊ | ೬೦ |
| ಭಾರತೀ ಭವಹಾರಿಯೇ ಭಕ್ತರಪ್ರಿಯೆ | ೩೬ |
| ಭೂರಮಣನೆ ಕಾಯೋ ನಿತ್ಯ | ೬೬ |
| ಮಂತ್ರಾಲಯ ನಿವಾಸ ಉತ್ತಮ ಹಂಸ | ೭೯ |
| ಮಧ್ವಮತವ ಪೊಂದದವನ ಭಕುತಿ ಯಾತಕೆ | ೭೭ |
| ಮಧ್ವರಾಯರ ಕರುಣ ಪಡೆಯದವ | ೭೪ |
| ಮನವೆ ನೀ ದೃಢವಾದರೆ | ೫೯ |
| ಮನವೆ ಮಾಧವನೊಳು ಮಮತೆ ಇರಲಿ | ೫೫ |
| ಮನಸು ನಿಲಿಸುವದು ಬಹಳ ಕಷ್ಟ | ೫೬ |
| ಮಾತನಾಡೈ ಮನ್ನಾರಿಕೃಷ್ಣ | ೮೨ |
| ಮಾನ ನಿನ್ನದು ಅಭಿಮಾನ ನಿನ್ನದು | ೮೦ |
| ಮಾನಸ ಪೂಜೆಯನು ಮಾಡು | ೯೯ |
| ಮೀನನಾಗಿ ಕಮಠನಾಗಿ ಸೂಕರನಾಗಿ (ಸು) | ೧೧೨ |
| ಮೊಸರು ತಂದಿನೊ ರಂಗಾ ಮಾರ್ಗನ ಬಿಡೊ | ೯೬ |
| ಯಾಕೆ ಜೀವನವೆ ನೀ ಶ್ರೀಕಾಂತನ ಮರೆವಿ | ೪೫ |
| ಯಾಕೆ ಪುಟ್ಟಿಸಿದಿ ಇನ್ನು ಎಲೊ ಹರಿಯೆ | ೫೬ |
| ಯಾಕೆ ಬಂದಿ ಜೀವಾ ಯಾಕೆ ಬಂದಿ | ೫೩ |
| ರಂಗನ ನೋಡಿರೊ ಸಿರಿನರಸಿಂಗನ ಪಾಡಿರೊ | ೧೯ |
| ರಾಮ ಜಾನಕಿರಮಣ ರಾಜೀವದಳನಯನ ( ವಿ. ಕೃ.) | ೧೬೬ |

ರಾಮ-ರಾಮ ಎಂಬೆರಡಕ್ಷರ ೨೨
ರಾಮಾ ರಘುಕುಲಾಬ್ಧಿಸೋಮಾ ೨೨
ವರಗಳನು ಕೊಡುವದು ವಾಸುಕಿಯ ಪ್ರಿಯಾ ೮
ವಾಸುದೇವನ ನೆನೆದು ನೀ ಸುಖಿಯಾಗು ಮನವೇ ೫೯
ವ್ಯಾಪಾರ ಉದ್ಯೋಗವನು ಮಾಡುವೆ ೭೦
ವಿಠಲಾ ನಿನ್ನ ನಂಬಿದೆ ಎನ್ನ ಕಾಯೋ ೮೩
ವಿಷಯಾಶೆ ಬಿಟ್ಟು ಹೇಸಿ ಮಾರ್ಗದಿಂ ದೂರಿರಿಸು (ಉ) ೧೫೬
ವೆಂಕಟಾಚಲನಿಲಯಾ ಎನ್ನ ಒಡೆಯಾ ೪೪
ಶಂಕರನಾರಾಯಣ ಸಲಹೊ ಎನ್ನ ೩
ಶಿವನ ನೋಡಿರೋ ಇಂದು ಸ್ತವನ ಮಾಡಿರೋ ೬
ಶುಂಠನಿಗೆ ಉಂಟೆ ವೈಕುಂಠಾ ೧೦೧
ಶೋಭಾನೆ ಶೋಭಾನವೆನ್ನಿರೆ (ವಿ. ಕೃ.) ೧೬೪
ಶ್ರೀಗಯದಾ ಯಾತ್ರೆ ಮಾಡಿ (ಸು) ೧೫೧
ಸಕಲಕಾಲದಿ ಮಾಡಿದ ಕರ್ಮವು ೮೬
ಸಮ್ಯಗನಾಗು ಗಿರಿಯ ತಿಮ್ಮನೋತ್ತಮ
ಶ್ರೀಪುರುಷೋತ್ತಮ (ಸು) ೧೩೦
ಸಲ್ಲದೊ ಸಲ್ಲದೊ ಸರ್ವರು ಕೇಳಿ ೧೦೭
ಸಾರಿ ಭಜಿಸಿರೋ ಟೀಕಾಚಾರ್ಯರಂಘ್ರಿಯ ೩೫
ಸೀತೆಯ ಭೂಮಿಜಾತೆಯ ೨೩
ಸೇರಿದೆ ನಿನ್ನ ವೆಂಕಟರನ್ನ ಪಾಲಿಸು ಎನ್ನ ೨೪
ಹದಿನಾಲ್ಕು ಲೋಕವನಾಳುವ ತಂದೆಗೆ ೪೬
ಹರಿದಾಸನಾದರೆ ಹ್ಯಾಗಿರಲಿಬೇಕು ೧೦೮
ಹರಿನಾಮ ಪ್ರಹ್ಲಾದನ್ನ ವೊರೆ ಕೇಳಿ ಒದಗಿತು (ಸು) ೧೨೦
ಹರಿಯ ನೆನೆಸಿದ ದಿವಸ ಶುಭಮಂಗಳಾ ೬೪
ಹರಿಯ ಮರೆದುದಕಿಂತ ಪಾಪವಿಲ್ಲಾ ೭೩
ಹರೇವಿಠ್ಠಲಾ ಪಾಂಡುರಂಗಾ ೯
ಹಿಗ್ಗದಿರು ಹಿಗ್ಗದಿರು ಮನುಜಪಶುವೆ ೫೦




# ದಾಸ ಸಾಹಿತ್ಯಾವಲೋಕನ

( ಪರಂಪರೆಯ ಪಕ್ಷಿನೋಟ )

---

"ಸಮಾಜ ಸುಧಾರಣಾ ಅಂಗಗಳಲ್ಲಿ ಸಾಹಿತ್ಯದ ಪಾತ್ರವೂ ಪ್ರಮುಖವಾದದ್ದು." ಸಾಹಿತ್ಯವು ಸಮಾಜದ ಕನ್ನಡಿ ಎಂದೂ ಹೇಳುತ್ತಾರೆ. ಆದುದರಿಂದಲೇ, ಸಾಹಿತ್ಯದ ಮುಖಾಂತರ ಸಮಾಜಸುಧಾರಣೆಯಾಗಬೇಕು ಎಂಬ ಸೊಲ್ಲು ಇಂದು ಎಲ್ಲೆಡೆಗೂ ಕೇಳಿ ಬರುತ್ತದೆ. ವ್ಯಕ್ತಿಯ ನೋವು-ನಲಿವುಗಳ ಚಿತ್ರ, ಈ ಸಾಹಿತ್ಯದಲ್ಲಿ ಒಂದೆಡೆಗೆ ಕಂಡು ಬಂದರೆ, ಮತ್ತೊಂದೆಡೆಗೆ ಸಾಹಿತಿಯು ತನ್ನ ಲೇಖನಿಯಿಂದ ಸಮಾಜದ ಲೋಪ-ದೋಷಗಳನ್ನು ಚಿತ್ರಿಸುತ್ತಾನೆ. ಇಂದಿನ ಸಮಾಜದಲ್ಲಿಯ ಜಾತಿಭೇದ, ಬಡವ-ಸಿರಿವಂತನೆಂಬ ಭೇದಭಾವ—ಮುಂತಾದ ಚಿತ್ರಗಳನ್ನು ಸಾಹಿತಿಯು ಜಾಣ್ಮೆಯಿಂದ ಚಿತ್ರಿಸುತ್ತಾನೆ. ಈ ಚಿತ್ರಣವು ನಾಟಕ, ಕಾದಂಬರಿ, ಸಣ್ಣಕಥೆ ಇಲ್ಲವೆ ಪದ್ಯರೂಪದಲ್ಲಿ ಪ್ರಕಟವಾಗುತ್ತದೆ. ಆದುದರಿಂದ ಸಮಾಜದ ಪುನರ್ನಿರ್ಮಾಣ ಮಾಡಲು ಹೊರಟ ಇಂದಿನ ಸರಕಾರವು ಸಾಹಿತ್ಯದಿಂದಲೂ ಕೆಲವು ಅಂಶಗಳನ್ನು ಪಡೆದರೆ ಒಳಿತು. ಈ ದಿಶೆಯಲ್ಲಿ ಸುಧಾರಣೆ ಮಾಡಿದರೆ ಆದರ್ಶ ಸಮಾಜನಿರ್ಮಾಣದ ಗುರಿಯು ಸಾಧಿಸಬಲ್ಲದು.

ಭಾರತವು ಹಲವು ಸಂಸ್ಕೃತಿಗಳ ತವರಾಗಿದೆ, ಹಲವು ಧರ್ಮಗಳ ಆಗರವಾಗಿದೆ. ಅದರಲ್ಲಿ ಕರ್ನಾಟಕವಂತೂ ವಿವಿಧ ಭಕ್ತಿಪಂಥಗಳ ನೆಲೆಯಾಗಿದೆ. ಆದಿಕಾಲದಿಂದಲೂ ವಿವಿಧ ಧರ್ಮಗಳು, ಈ ಧರ್ಮಗಳನ್ನು ಬೋಧಿಸುವ ಧರ್ಮೋಪದೇಶಕರು. ಮಹಾತ್ಮರು ಈ ಪುಣ್ಯಭೂಮಿಯಲ್ಲಿ ಜನ್ಮತಾಳಿ ಕಾಲಕಾಲಕ್ಕೆ ಸಮಾಜದಲ್ಲಿ ಹಾಳಾಗಿ ಹೋಗುತ್ತಿರುವ ನೀತಿ,

ಸಂಸ್ಕೃತಿ, ಪ್ರೀತಿ, ಸಹಕಾರ, ಕಾಯಕ ಮುಂತಾದ ಜೀವನಮೌಲ್ಯಗಳನ್ನು ಕುರಿತು ಜನತೆಗೆ ಎಚ್ಚರಿಕೆಯಿತ್ತಿದ್ದಾರೆ.

ವೇದ-ಉಪನಿಷತ್ತುಗಳು ಸಾಮಾನ್ಯ ಜನತೆಗೆ ನಿಲುಕದ ಕಠಿಣ ಭಾಷೆಯಲ್ಲಿ ತತ್ತ್ವೋಪದೇಶ ಮಾಡಿವೆ. ಸುಸಂಸ್ಕೃತನಾದ, ಉಚ್ಚಮಟ್ಟದ ತಿಳುವಳಿಕೆಯುಳ್ಳವನು ಮಾತ್ರ ಆಳವಾದ ಅಧ್ಯಯನದಿಂದ ಈ ತತ್ತ್ವಗಳನ್ನು ತಿಳಿಯಬಹುದಿತ್ತು. ಸಾಮಾನ್ಯ ಜನತೆಗೆ ಇವುಗಳ ಅಧ್ಯಯನ ಒತ್ತಟ್ಟಿಗಿರಲಿ ಸಮೀಪ ಕೂಡ ಹೋಗುವ ಅಧಿಕಾರ ಇರಲಿಲ್ಲ. ಅವನ ಮಟ್ಟಿಗೆ ಇವು ನಿಲುಕದ ನಕ್ಷತ್ರಗಳಾಗಿದ್ದವು. ಇಂಥ ಪರಿಸ್ಥಿತಿಯಲ್ಲಿ ಕನ್ನಡ ದಾಸ ಸಾಹಿತ್ಯವು ವೇದೋಪನಿಷತ್ತುಗಳ ತತ್ತ್ವಗಳನ್ನೇ ಸುಲಭವಾಗಿ ಎಲ್ಲರಿಗೂ ತಿಳಿಯುವಂತೆ ಬೋಧಿಸಲು ರೂಪುಗೊಂಡಿತು.

ಇತರ ಸಾಹಿತ್ಯದೊಂದಿಗೆ ದಾಸಸಾಹಿತ್ಯದ ತುಲನೆಯನ್ನು ಮಾಡಿದರೆ ವೇದ-ಉಪನಿಷತ್ತಿಗಿರುವ ಪರಂಪರೆಯೇ ಇದಕ್ಕೂ ಇರುವದು ಎದ್ದು ಕಾಣುತ್ತದೆ. ವೇದಾದಿಗಳು ಒಬ್ಬರ ಬಾಯಿಂದ ಒಬ್ಬರ ಬಾಯಿಗೆ ಸಾಗಿ ಬಂದವೇ ವಿನಹ ಗ್ರಂಥಸ್ಥವಾಗಿ ಉಳಿದಿರಲಿಲ್ಲ. ಅದೇ ರೀತಿ ದಾಸ ಸಾಹಿತ್ಯವೂ ಗ್ರಂಥಸ್ಥವಾಗಿ ಉಳಿದು ಬಂದಿರುವುದಕ್ಕಿಂತಲೂ ಹೆಚ್ಚಾಗಿ ಜನರ ಬಾಯಿಯಲ್ಲಿಯೇ ವಾಕ್ ಸಾಹಿತ್ಯವಾಗಿ ನಿಂತಿತು. ಭಕ್ತರ ಮೊರೆಯನ್ನು ಭಗವಂತನಿಗೆ ಮುಟ್ಟಿಸುವ ಈ ಹಾಡುಗಳು ತಲೆತಲಾಂತರವಾಗಿ ಉಳಿದುಕೊಂಡು ಬಂದಿವೆ.

ಇಲ್ಲಿ ತತ್ತ್ವ, ಧರ್ಮ ಮುಂತಾದವುಗಳ ಗಹನವಾದ ವಿವೇಚನೆಯು ನಮ್ಮ ಉದ್ದೇಶವಲ್ಲ. ಆದುದರಿಂದ ಧಾರ್ಮಿಕ ಸಾಹಿತ್ಯ ಹೇಗೆ ಉದಿಸಿದೆ-ಯೆಂಬುದನ್ನಷ್ಟೇ ತಿಳಿಯೋಣ. ಕನ್ನಡಸಾಹಿತ್ಯ ಇತಿಹಾಸದ ಪುಟಗಳನ್ನು ತಿರುವುತ್ತಾ ಹೋದರೆ ವಡ್ಡಾರಾಧನೆ ಹಾಗೂ ಕವಿರಾಜಮಾರ್ಗಗಳು ಉಪ-ಲಬ್ಧ ಪ್ರಾಚೀನ ಕೃತಿಗಳೆಂದು ಹೇಳಬಹುದು. ಇವುಗಳಲ್ಲಿ ವಡ್ಡಾರಾಧನೆ ಜೈನತತ್ತ್ವವುಳ್ಳ ೧೯ ಕಥೆಗಳನ್ನು ಹೊಂದಿದೆ. ಕವಿರಾಜಮಾರ್ಗವು ಕಾವ್ಯಲಕ್ಷಣಗ್ರಂಥವಾಗಿದೆ. ಮಹಾಕವಿ ಪಂಪನಿಂದ ಅಂದರೆ ಹತ್ತನೆಯ ಶತಮಾನದಿಂದ ಧರ್ಮದೃಷ್ಟಿಯೇ ಸಾಹಿತ್ಯಸೃಷ್ಟಿಗೆ ಕಾರಣವಾಗುತ್ತ ಬಂದಿದೆ. ಹತ್ತನೆಯ ಶತಮಾನದಿಂದ ಸುಮಾರು ಹನ್ನೆರಡನೆಯ ಶತ-

ಮಾನದ ವರೆಗೆ ಚಂಪೂಕಾವ್ಯಪ್ರಕಾರವು ಜೈನತತ್ತ್ವವನ್ನೊಳಗೊಂಡ ಶ್ರೇಷ್ಠ ಸಾಹಿತ್ಯವನ್ನು ಕೊಡುತ್ತ ತಂದಿದೆ. ಒಂದು ರೀತಿಯಲ್ಲಿ ಕನ್ನಡ ಸಾಹಿತ್ಯದ ಉದಯವೇ ಜೈನಸಾಹಿತ್ಯದಿಂದಾಯಿತು ಎಂದೂ ಹೇಳುವ-ದುಂಟು.

ಹತ್ತನೆಯ ಶತಮಾನದಿಂದ ಹನ್ನೆರಡನೆಯ ಶತಮಾನದ ವರೆಗಿನ ಸಾಹಿತ್ಯ ಅನುಭಾವಸಾಹಿತ್ಯವಲ್ಲ. ಮಹಾಭಾರತ, ರಾಮಾಯಣಗಳ ಕಥಾವಸ್ತುವುಳ್ಳ ಚಂಪೂಕಾವ್ಯಗಳು, ತೀರ್ಥಂಕರರ ಚರಿತ್ರೆಯುಳ್ಳ ಜೈನ ಪುರಾಣಗಳು ಈ ಕಾಲದಲ್ಲಿ ಜನ್ಮತಾಳಿವೆ. ಹನ್ನೆರಡನೆಯ ಶತಮಾನದ ನಂತರದ ಸಾಹಿತ್ಯ— ಅನುಭಾವಸಾಹಿತ್ಯವೆಂದು ಹೇಳಬಹುದು. ಅನು-ಭಾವದ ದಿವ್ಯಶಕ್ತಿಯನ್ನು ಕೊಡುತ್ತ ತಂದವರು ೧೨ನೆಯ ಶತಮಾನದ ಶಿವಶರಣರು. ಈ ವರೆಗೆ ಮೆರೆದಿದ್ದ ಚಂಪೂ ಸಂಪ್ರದಾಯವು ಶಿವಶರಣರ ಕಾಲಕ್ಕೆ ಮಂದಗತಿಯಿಂದ ಸಾಗಿತು. ಶಿವಶರಣರು ಭಾಷಾದೃಷ್ಟಿಯಿಂದ, ಛಂದಸ್ಸಿನ ದೃಷ್ಟಿಯಿಂದ ಕ್ರಾಂತಿಗೈದರು. ತತ್ತ್ವೋಪದೇಶವನ್ನೂ ಕೂಡ ಜನಸಾಮಾನ್ಯನಿಗೆ ಒಗ್ಗುವ ರೀತಿಯಲ್ಲಿ ಮಾಡಲಾರಂಭಿಸಿದರು. ಶಿವನನ್ನೇ ಆರಾಧ್ಯದೇವನನ್ನಾಗಿಟ್ಟುಕೊಂಡ ಈ ಶರಣಸಂಪ್ರದಾಯ ಕರ್ನಾಟಕದಲ್ಲಿ ಮಹಾಕ್ರಾಂತಿಯನ್ನೇ ಉಂಟುಮಾಡಿತು. ಮೇಲು—ಕೀಳು, ಉಚ್ಚ-ನೀಚ, ಬಡವ-ಬಲ್ಲಿದ ಎಂಬ ವೈಷಮ್ಯದಿಂದ ಕೂಡಿದ ಅಂದಿನ ಸಮಾಜಕ್ಕೆ ಶಿವಶರಣರು ಬೋಧನಾಮೃತದ ಧಾರೆಯನ್ನೆರೆದು ಪರಿಶುದ್ಧಗೊಳಿಸಿದರು. ಛಂದೋಬದ್ಧವಾದ ರಚನೆಗಳ ಬದಲಾಗಿ " ವಚನ " ಸಾಹಿತ್ಯಪ್ರಕಾರವು ರೂಢಿಗತವಾಯಿತು.

ಶಿವಶರಣರ ತರುವಾಯದ ಅನುಭಾವಸಾಹಿತ್ಯ ನಿರ್ಮಾತೃಗಳೆಂದರೆ ಹರಿದಾಸರು. ಕನ್ನಡ ನಾಡಿನ ಭಕ್ತಿಪರಂಪರೆಯಲ್ಲಿ ಹರಿದಾಸರು ವಚನ ಮಹಾನುಭಾವರ ಸಂಪ್ರದಾಯಕ್ಕೆ ಉತ್ತರಾಧಿಕಾರಿಗಳಾಗಿ ಬಂದ ಮಹಾನು ಭಾವರು. ಹರಿದಾಸರು ಶ್ರೀಹರಿಯನ್ನು ಆರಾಧ್ಯದೈವತವನ್ನಾಗಿಟ್ಟು ಕೊಂಡು ಶ್ರೀಹರಿಯ ಸ್ತುತಿಯೊಂದಿಗೆ ಸಮಾಜಕ್ಕೆ ಬೋಧನಾಪರವಾದ ಕೀರ್ತನ, ಸುಳಾದಿ, ಉಗಾಭೋಗಗಳನ್ನು ರಚಿಸಿದರು. ಶಿವಶರಣರಂತೆ, ಆತ್ಮಸಾಕ್ಷಾತ್ಕಾರ ಹಾಗೂ ನೀತಿಬೋಧೆಗಳು ದಾಸವರೇಣ್ಯರೆಲ್ಲರ ಗುರಿ-

ಕೂಗಿದ್ದವು. ಕನ್ನಡ ವಾಙ್ಮಯದಲ್ಲಿ ವಚನಸಾಹಿತ್ಯಕ್ಕಿದ್ದ ಪ್ರತಿಭೆ ಹಾಗೂ ವಿಶೇಷ ಸ್ಥಾನಗಳು ದಾಸಸಾಹಿತ್ಯಕ್ಕೂ ಇವೆ. ಆದುದರಿಂದಲೇ ಶರಣಸಾಹಿತ್ಯ—ದಾಸಸಾಹಿತ್ಯಗಳೆರಡನ್ನೂ ವಿದ್ವಾಂಸರು "ತವನಿಧಿ" ಎಂದು ಕರೆದಿದ್ದಾರೆ. ಕನ್ನಡ ವಾಗ್ದೇವಿಯ ಎರಡು ಕಣ್ಣುಗಳೆಂದೂ ಸ್ತುತಿಸಿದ್ದಾರೆ. ಮಧ್ಯಯುಗದ ವಚನಸಾಹಿತ್ಯದಲ್ಲೂ, ದಾಸಸಾಹಿತ್ಯ ದಲ್ಲೂ ಭಕ್ತರ ಗಾಢ ಭಗವತ್ಪ್ರೀತಿ ಸೂಸಿದೆ; ದಿವ್ಯ ಮಧುರ ಧರ್ಮಸುಧೆ ತುಂಬಿದೆ. ದೈವಭಕ್ತರು ಹಲವಾರು ಶತಮಾನಗಳಿಂದ ಈ ವಚನಗಳನ್ನೂ ಕೀರ್ತನೆಗಳನ್ನೂ ಹಾಡಿ ನಲಿದು ಆತ್ಮೋದ್ಧಾರಮಾರ್ಗವನ್ನು ಕಂಡುಕೊಂಡಿ ದ್ದಾರೆ. ಮಾನವಹೃದಯದ ತಂತಿಗಳನ್ನು ಅವು ಅಂದಿನಂತೆ ಇಂದಿಗೂ ಮಿಡಿಯುತ್ತವೆ. ಕೆಲವು ವಚನ, ಕೀರ್ತನೆಗಳಂತೂ ತಮ್ಮ ಉಜ್ವಲ ಕಾವ್ಯ ಗುಣಗಳಿಗಾಗಿ ಪ್ರಸಿದ್ಧವಾಗಿವೆ. ಈ ಸಂಗೀತಗುಣವೇ ಅವುಗಳನ್ನು ಚಿರಂತನವಾಗಿಸಿದೆ.

ವಿಜಯನಗರ ದೊರೆಗಳ ಆಳಿಕೆಯ ಕಾಲವು ದಾಸಸಾಹಿತ್ಯದ ವಸಂತ- ಕಾಲವಾಗಿದೆ. ವಿಜಯನಗರ ಸಾಮ್ರಾಜ್ಯದ ಪತನದೊಂದಿಗೆ ದಾಸಸಾಹಿ ತ್ಯವೂ ಕ್ಷೀಣಿಸುತ್ತ ಬಂದಿರುವುದನ್ನು ಕಾಣುತ್ತೇವೆ. ಹರಿದಾಸರು ಕೇವಲ ಮಧ್ವಮತ ಪ್ರಚಾರಕರು ಎಂಬ ಹೇಳಿಕೆಯುಂಟು. ಆದರೆ ಇದು ಸರಿಯಲ್ಲ. ಕೇವಲ ಮಧ್ವಮತಪ್ರಸಾರ ಕಾರ್ಯವನ್ನು ಹರಿದಾಸರು ಕೈಕೊಂಡಿದ್ದರೆ ಹರಿದಾಸಸಾಹಿತ್ಯವು ಶುಷ್ಕವಾಗುತ್ತಿತ್ತು. ಇಷ್ಟೊಂದು ಜನಪ್ರಿಯವಾಗು ತ್ತಿರಲಿಲ್ಲ. ಹರಿದಾಸರ ತರುವಾಯ ಕನ್ನಡ ಸಾಹಿತ್ಯವಾಹಿನಿ ಒಂದಿ- ಲ್ಲೊಂದು ಧರ್ಮತತ್ವದೊಂದಿಗೆ ವಿವಿಧ ರೂಪಗಳಲ್ಲಿ ಮುದ್ದಣನವರೆಗೂ ಹರಿದಿದ್ದಾಳೆ.

**ಭಕ್ತಿಯ ಪ್ರಾಚೀನತೆ-ಭಕ್ತಿಪಂಥಗಳ ಮೂಲ :**

ನೀರಿನ ಪ್ರವಾಹವು ಬೇರೆ ಬೇರೆ ಪ್ರದೇಶಗಳಲ್ಲಿ ಹಾಯ್ದು ಹೋಗು ವಾಗ ಆಯಾ ಪ್ರದೇಶದ ಭೂಗುಣಗಳಾದ ಉಪ್ಪು, ಸಾಳು, ಸಿಹಿ ಮುಂತಾದ ರುಚಿಯನ್ನು ನೈಗೂಡಿಸುಕೊಳ್ಳುವಂತೆ– ಮನುಷ್ಯನಲ್ಲಿಯ ಪ್ರೇಮರಸವು ಕೂಡ ಪ್ರವಹಿಸುತ್ತಿರುವ ಪಾತ್ರಗಳಿಗೆ ತಕ್ಕಂತೆ ಗುಣಧರ್ಮ ದಲ್ಲಿ ಬದಲಾವಣೆ ಹೊಂದುತ್ತ ಹೋಗುತ್ತದೆ. ವಾತ್ಸಲ್ಯ, ಪ್ರೀತಿ,

ಅಕ್ಕರತೆ, ಪ್ರಣಯ, ಗೌರವ, ಭಕ್ತಿ ಇವೇ ಆ ಗುಣಧರ್ಮಗಳೆಂದು ಕರೆಯಲ್ಪ ಡುತ್ತವೆ. ಇವೆಲ್ಲಾ ಪ್ರೇಮರಸದ ಪ್ರತಿರೂಪಗಳಾಗಿವೆ. ಹಾಗಾದರೆ ಭಕ್ತಿ ರಸವೂ ಪ್ರೇಮರಸದ ಒಂದು ರೂಪವೆಂದಂತಾಯಿತಲ್ಲವೇ ? ಈ ಭಕ್ತಿರಸದ ಮೂಲ ಉಗಮಕ್ಕೆ ದೇವರ ಸಂಕೇತವೆನಿಸಿದ ಮೂರ್ತಿ—ಪ್ರತಿಮೆಗಳು ಕಾರಣವಾಗಿವೆ. ಜಗತ್ತಿನ ಪ್ರತಿಯೊಂದು ಜನಾಂಗವೂ ಒಂದಿಲ್ಲೊಂದು ರೂಪದಿಂದ ಮೂರ್ತಿಪೂಜೆಯನ್ನು ಹೊಂದಿದೆ. ಕೆಲವೆಡೆ ಸಾಕಾರವಿದ್ದರೆ, ಇನ್ನು ಕೆಲವೆಡೆ ನಿರಾಕಾರವಿದೆ. ಭಾರತದಲ್ಲಿ ಈ ಮೂರ್ತಿಪೂಜೆಯ ಪ್ರಾಚೀನತೆಯು ಹರಪ್ಪಾ ಮೋಹೆಂಜೋದಾರೋ ಸಂಸ್ಕೃತಿಗಳ ವರೆಗೂ ಹೋಗುತ್ತದೆ. ಅಲ್ಲಿಯ ಅವಶೇಷಗಳ ಆಧಾರದಿಂದ, ಮೊದಲಿನಿಂದಲೂ ಭಕ್ತಿಯ ಪ್ರವಾಹವು ಒಂದಿಲ್ಲೊಂದು ರೀತಿಯಲ್ಲಿ ಒಂದಿಲ್ಲೊಂದು ಮಾರ್ಗ ದಲ್ಲಿ ಹರಿಯುತ್ತ ಬಂದಿದೆ ಎಂದು ಹೇಳಬಹುದು. ಒಂದೆಡೆ ವಿಷ್ಣುಪರ ವಾಗಿದ್ದರೆ, ಮತ್ತೊಂದೆಡೆ ಶಿವಪರವಾಗಿದೆ.

ಕರ್ನಾಟಕದಲ್ಲಿ ಶೈವಪಂಥ, ವೈಷ್ಣವ ಪಂಥಗಳೆರಡೂ ಜೊತೆ-ಜೊತೆಯಾಗಿ ನಿಂತವು. ರಾಜಾಶ್ರಯವೂ ಇವುಗಳಿಗೆ ಕಾಲಾನುಕ್ರಮದಿಂದ ಲಭಿಸಿತು. ರಾಜಾಶ್ರಯದ ಭದ್ರವಾದ ರಕ್ಷಣೆಯಲ್ಲಿ, ಅಪಾರವಾದ ಜನಾ-ದರಣೆಯ ಪಾಲನೆಯಲ್ಲಿ ಈ ಎರಡೂ ಭಕ್ತಿಪಂಥಗಳು ಕರ್ನಾಟಕದಲ್ಲಿ ಬಹುಕಾಲ ಬಾಳಿದವು. ತತ್ತ್ವವಿಚಾರದಿಂದಲೂ ಎಲ್ಲ ಭಕ್ತಿಪಂಥಗಳು ಕ್ರಾಂತಿಯ ಕಹಳೆಯನ್ನೇ ಊದಿವೆ. ವೇದ-ಉಪನಿಷತ್ತುಗಳಲ್ಲಡಗಿದ ಗಹನವಾದ ವೇದಾಂತ ತತ್ತ್ವಗಳನ್ನು ಸುಲಭವಾಗಿ ಶ್ರೀಸಾಮಾನ್ಯನಿಗೆ ತಿಳಿಸುವ ಪ್ರಯತ್ನ ಮಾಡಿವೆ.

ಕ್ರಿ.ಶ. ೧೨ನೆಯ ಶತಮಾನದಿಂದ ೧೪ನೆಯ ಶತಮಾನದ ವರೆಗಿನ ಕಾಲವೆಂದರೆ ಕರ್ನಾಟಕದಲ್ಲಿ ಅತಿ ಅದ್ಭುತ ತತ್ತ್ವಗಳ, ಉನ್ನತ ವಿಚಾರಗಳ ತಾಕಲಾಟದ ಕಾಲವಾಗಿದೆ. ಈ ಕಾಲದಲ್ಲಿ ಬಸವಣ್ಣನವರ ವೀರಶೈವ ಧರ್ಮವೂ, ಶ್ರೀರಾಮಾನುಜರ ವಿಶಿಷ್ಟಾದ್ವೈತವೂ, ಶ್ರೀಮಧ್ವಾಚಾರ್ಯರ ದ್ವೈತಸಿದ್ಧಾಂತವೂ ಉಗಮಗೊಂದಿ ಪರತತ್ತ್ವ ವಿವೇಚನೆಯನ್ನು ಉಚ್ಚ-ಮಟ್ಟಕ್ಕೇರಿಸಿದವು. ಮಧ್ವಾಚಾರ್ಯರು ರಾಮಾನುಜರ ಮೂರು ತತ್ತ್ವ ಗಳನ್ನು ಖಂಡಿಸಿ ಜೀವಾತ್ಮ, ಪರಮಾತ್ಮ ಎಂಬ ಎರಡೇ ತತ್ತ್ವಗಳನ್ನು

ಒಪ್ಪಿಕೊಂಡು ಜೀವಾತ್ಮ, ಪರಮಾತ್ಮರು ಪರಸ್ಪರ ಭಿನ್ನರೆಂದೂ ಅವರ ಭಿನ್ನತೆ ಶಾಶ್ವತವೆಂದೂ ಸಾಧಿಸಿದರು. ತಮ್ಮ ತಮ್ಮ ಮತಪ್ರಚಾರಕ್ಕೆ ಇವರೆಲ್ಲಾ ಭಕ್ತಿಪಂಥವನ್ನೇ ಬಳಸಿಕೊಂಡಿದ್ದಾರೆ.

ತತ್ತ್ವವಿವೇಚನೆಗೂ ಭಕ್ತಿಮಾರ್ಗಕ್ಕೂ ತಳಕು ಹಾಕಿ ಹೃದಯಂಗಮ ವಾಗಿ ಉಪದೇಶ ಮಾಡಿದವರೆಂದರೆ ದ್ವೈತಸಿದ್ಧಾಂತದ ಪ್ರವರ್ತಕ ರಾದ ಮಧ್ವಾಚಾರ್ಯರೆಂದು ಹೇಳಬೇಕು. ಕರ್ನಾಟಕ ಹರಿದಾಸಪರಂ ಪರೆಗೆ ಮಧ್ವಾಚಾರ್ಯರೇ ಮೂಲಪುರುಷರು. ತಮ್ಮ ಸಿದ್ಧಾಂತದಲ್ಲಿ ಪ್ರಮಾಣಗಳ ಸ್ವರೂಪವನ್ನು ಕೂಲಂಕಷವಾಗಿ ನಿರೂಪಿಸಿದ್ದಾರೆ. ಇದೇ ಕಾರ್ಯವು ಮುಂದೆ ಅನೇಕ ಜನರಿಂದ ಮುಂದುವರಿಸಲ್ಪಟ್ಟಿತು. ಮಧ್ವಾ-ಚಾರ್ಯರ ನಂತರದ ಹರಿದಾಸರೆಲ್ಲಾ ತಮ್ಮ ಕೀರ್ತನೆಗಳಿಗೆ ಮಧ್ವಮತ ವನ್ನು ಅಡಿಗಟ್ಟಾಗಿ ಮಾಡಿಕೊಂಡು ನೀತಿಬೋಧನಾಪರವಾದ ಸುಂದರ ಕೀರ್ತನೆಗಳನ್ನು ರಚಿಸಿದರು. ಈ ಮಾತನ್ನನುಲಕ್ಷಿಸಿಯೇ ಹಲವರು, ಹರಿದಾಸರು ಮಧ್ವಮತ ಪ್ರಚಾರಕರೆಂದು ಹೇಳುವುದುಂಟು. ವಿಠ್ಠಲ ಭಕ್ತಿಸಂಪ್ರದಾಯಕ್ಕೂ ಶ್ರೀ ಮಧ್ವಾಚಾರ್ಯರೇ ಕಾರಣೀಭೂತರು. ಮಹಾರಾಷ್ಟ್ರದ ಪಂಢರಪುರ ವಿಠ್ಠಲನು ಇವರ ಕಾಲಕ್ಕೆ ಕನ್ನಡಿಗರ ದೈವತನಾಗಿದ್ದ.

ಭಕ್ತಿಪಂಥಗಳ ಪ್ರಾಚೀನತೆ ಮತ್ತು ಪರಿಚಯಗಳನ್ನು ತಿಳಿದಾದ ಮೇಲೆ ಕರ್ನಾಟಕ ಹರಿದಾಸಪರಂಪರೆಯ ಬಗೆಗೂ ತಿಳಿಯುವುದು ಅವಶ್ಯಕ. ಮಹಾರಾಷ್ಟ್ರದ ಸಂತರಂತೆ ಕರ್ನಾಟಕದ ಹರಿದಾಸರೂ ಭಕ್ತಿ-ಪಂಥಕ್ಕೆ ಸೇರಿದವರಾಗಿದ್ದಾರೆ. ಇವರಲ್ಲಿ ನರಹರಿತೀರ್ಥರು, ಶ್ರೀಪಾದ-ರಾಯರು, ವ್ಯಾಸರಾಯರು, ರಾಘವೇಂದ್ರರು ಪೀಠಸ್ಥರಾದರೆ, ಪುರಂದರ–ಕನಕಾದಿಗಳು ದೀಕ್ಷಾಹರಿದಾಸರಾಗಿದ್ದಾರೆ. ಅಚಲಾನಂದರೇ ದಾಸಸಾಹಿ ತ್ಯದ ಪ್ರಥಮ ವ್ಯಕ್ತಿಗಳೆಂಬ ಹೇಳಿಕೆಯಿದೆ. ಆದರೆ ಅಚಲಾನಂದ ವಿರಚಿತ ಕೀರ್ತನೆಗಳನ್ನು ವೀಕ್ಷಿಸಲಾಗಿ ಅವೆಲ್ಲವುಗಳ ಭಾಷೆ ಹೊಸಗನ್ನಡದಂತೆ ಇರುವುದರಿಂದ ಆ ಹೇಳಿಕೆಯು ಸರಿಯೆನಿಸಲಾರದು.

ಆದರೆ ೧೩ನೆಯ ಶತಮಾನದ ನರಹರಿತೀರ್ಥರೇ ದಾಸಸಾಹಿತ್ಯದ ವ್ಯವಸ್ಥಿತ ಬೆಳವಣಿಗೆಗೆ ನಾಂದಿ ಹಾಡಿದರೆಂದು ಖಚಿತವಾಗಿ ಹೇಳಬಹುದು. ನರಹರಿತೀರ್ಥರು ಮಧ್ವಾಚಾರ್ಯರ ನಂತರ ಪೀಠಾರೋಹಣ ಮಾಡಿ

ದರು. ಮಧ್ವಸಿದ್ಧಾಂತ ಸೌರಭವನ್ನು ಬೀರುವ ಅನೇಕ ಕೀರ್ತನೆಗಳನ್ನು ನರಹರಿತೀರ್ಥರು ರಚಿಸಿದ್ದಾರೆ. ಇವರ ಪರಂಪರೆಯನ್ನೇ ನಂತರ ಬಂದ ಹರಿದಾಸರೆಲ್ಲಾ ಬೆಳೆಸಿಕೊಂಡು ಬಂದಿದ್ದಾರೆ.

ನರಹರಿತೀರ್ಥರ ನಂತರ ದಾಸಸಾಹಿತ್ಯದಲ್ಲಿ ಕೇಳಿಬರುವ ಮತ್ತೊಂದು ಪ್ರಮುಖ ಹೆಸರೆಂದರೆ ಶ್ರೀಪಾದರಾಯರದು. ಕಾಲ ಕ್ರಿ. ಶ. ಸು. ೧೪೨೨. ಇವರ ಕಾಲದಲ್ಲಂತೂ ದಾಸಸಾಹಿತ್ಯ ಮೆರುಗನ್ನು ಪಡೆಯಿತು. ಶ್ರೀಪಾದ-ರಾಯರು ವೇದಾದಿ ಸಕಲ ಶಾಸ್ತ್ರಗಳಲ್ಲಿ, ಕನ್ನಡ ಸಾಹಿತ್ಯ, ಸಂಗೀತಗಳಲ್ಲಿ ಪರಿಣತರಿದ್ದರು. ಸಂಗೀತದಲ್ಲಿ ಸುಳಾದಿಯೆಂಬ ಪರಿಭಾಷೆಯಿಂದ ಕರ್ನಾಟಕ ಗಾಯನಕ್ಕೆ ಹೊಸ ಬೆಳಕನ್ನಿತ್ತ ಕೀರ್ತಿ ಶ್ರೀಪಾದರಾಯರಿಗೆ ಸಲ್ಲುತ್ತದೆ.

ದಾಸಸಾಹಿತ್ಯದ ಉಜ್ವಲ ಪರಂಪರೆಯನ್ನು ಶ್ರೀಪಾದರಾಯರ ತರು-ವಾಯ ಬೆಳೆಯಿಸಿದವರೆಂದರೆ ವ್ಯಾಸರಾಯರು. ಇವರು ಬಾಳಿದ ಕಾಲ ಕ್ರಿ. ಶ. ಸು. ೧೪೪೭ ರಿಂದ ೧೫೩೯ ಎಂದು ವಿದ್ವಾಂಸರ ಮತ. ಮಠಾಧಿಪತಿಗಳಾಗಿ ಒಂದೆಡೆಗೆ ರಾಜಗುರುಗಳೆನಿಸಿದರೆ, ಮತ್ತೊಂದೆಡೆ ಧರ್ಮೋಪದೇಶಕರೂ ಆಗಿದ್ದರು. ಸಾಳುವ ನರಸಿಂಹನ ಆಳಿಕೆಯ ಕಾಲದಿಂದ ಅಚ್ಯುತ-ರಾಯನ ಆಳಿಕೆಯುವರೆಗೆ ಸುಮಾರು ೬೦ ವರ್ಷಗಳ ಕಾಲ ಸಕಲ ರಾಜ ಮಹಾರಾಜರಿಂದ ಸನ್ಮಾನಿಸಲ್ಪಟ್ಟರು.

ವಿಜಯನಗರ ಸಾಮ್ರಾಜ್ಯದ ಪ್ರಖ್ಯಾತ ದೊರೆಯೆನಿಸಿದ ಕೃಷ್ಣದೇವ ರಾಯನು ವ್ಯಾಸರಾಯರನ್ನು ಸನ್ಮಾನಿಸಿದ್ದ. ಅಂಕಿತಪ್ರದಾನಪದ್ಧತಿ ಇವರಿಂದಲೇ ಆರಂಭವಾಯಿತು. ವ್ಯಾಸರಾಯರು ತಮ್ಮ ನೇತೃತ್ವದಲ್ಲಿ "ದಾಸಕೂಟ"ವನ್ನು ಏರ್ಪಡಿಸಿದರು. ನಂತರ ಬಂದ ವಾದಿರಾಜ, ಪುರಂದರಾದಿಗಳು ಈ ದಾಸಕೂಟಕ್ಕೆ ಸೇರಿದವರಾಗಿದ್ದಾರೆ.

ಮೊದಮೊದಲು ಕೇವಲ ದೇವತಾಸ್ತುತಿಯನ್ನು ಹೊಂದಿದ್ದ ಹರಿ-ದಾಸರ ಕೀರ್ತನೆಗಳು ಬರುಬರುತ್ತಾ ನೀತಿಬೋಧಕವೂ, ಅಲಂಕಾರ ಸಂಯೋಜಿತವೂ ಆದವು. ಕ್ರಿ. ಶ. ಸು. ೧೪೮೪ ರಿಂದ ೧೫೬೪ರಲ್ಲಿದ್ದವರೆಂದು ಹೇಳಲಾದ ಪುರಂದರದಾಸರ ಕಾಲವಂತೂ ದಾಸಸಾಹಿತ್ಯದ ಸುವರ್ಣ ಕಾಲವೆಂದು ಹೇಳಬಹುದು. ಕರ್ನಾಟಕ ಸಂಗೀತ ಹಾಗೂ ಸಾಹಿತ್ಯಗಳ

ಸಂಗಮದ ಕಾಲವಿದು. ಧಾರ್ಮಿಕ ಕ್ಷೋಭೆ, ಸಾಮಾಜಿಕ ಅಶಾಂತಿ, ಪರಸ್ಪರ ವೈಷಮ್ಯ ಮುಂತಾದವನ್ನೆಲ್ಲಾ ಗಮನಿಸಿ, ಈ ದುಷ್ಟಶಕ್ತಿಗಳಿಂದಾಗಿ ಹಾಳಾಗಿ ಹೋಗುತ್ತಿರುವ ಅಂದಿನ ಸಮಾಜವನ್ನು ಕುರಿತು ಪುರಂದರದಾಸರು ಮಮ್ಮಲನೆ ಮರುಗಿದ್ದಾರೆ. ಅಪೂರ್ವ ಕವಿತ್ವಶಕ್ತಿಯಿಂದ ಅಂದಿನ ಸಮಾಜದ ನ್ಯೂನತೆಯನ್ನು ಚಿತ್ರಿಸಿದ್ದಾರೆ. 'ಪುರಂದರ ವಿಠಲ' ಎಂಬುದು ಇವರ ಅಂಕಿತ. ಇವರು ಸಿರಿತನದಲ್ಲಿದ್ದವರು. ಇಚ್ಛೆಯ ತಿರುಕರಾದುದರಿಂದ, ಧನಮದದಿಂದ ಕೂಡಿದ ಡಾಂಭಿಕ ವ್ಯಕ್ತಿಗಳನ್ನು ಕಟುವಾಗಿ ಟೀಕಿಸಿದ್ದಾರೆ. ಇವರು ವ್ಯಾಸರಾಯರ ಶಿಷ್ಯರು. ದಾಸ-ಪರಂಪರೆಯಲ್ಲಿಯೇ ತಮ್ಮ ಅಲಗಿನಂಥ ಹದನಾದ ಬಿರುನುಡಿಗಳಿಗಾಗಿ, ಕಟುವಾದ ವ್ಯಂಗ್ಯಕ್ಕಾಗಿ ಪುರಂದರದಾಸರು ಖ್ಯಾತಿವೆತ್ತವರು. ಕಂಡ-ದ್ದನ್ನು ಕಂಡಂತಾಡುವ ಸ್ವಭಾವದವರು. ಕೀರ್ತನೆಗಳಲ್ಲಿ ದೇಶೀವಾಣಿಯ ಬಳಕೆಯನ್ನು ಧಾರಾಳವಾಗಿ ಮಾಡಿದರು.

ಪುರಂದರದಾಸರ ಜಾಡಿನಲ್ಲಿಯೇ ಸಾಗಿದ ಮತ್ತೊಬ್ಬ ದಾಸಶ್ರೇಷ್ಠರೆಂದರೆ ಕನಕದಾಸರು. ಕ್ರಿ. ಶ. ಹದಿನಾರನೆಯ ಶತಮಾನದಲ್ಲಿ ಬಾಳಿದ ಇವರು ಕಾಗಿನೆಲೆಯ ಆದಿಕೇಶವ ಸ್ವಾಮಿಯನ್ನು ಆರಾಧ್ಯದೈವತವನ್ನಾಗಿ ಮಾಡಿಕೊಂಡಿದ್ದರು. ಕೀಳುಕುಲದಲ್ಲಿ ಜನಿಸಿದ್ದರೂ ಪೂರ್ವಜನ್ಮದ ಸಂಸ್ಕಾರದ ಫಲದಿಂದ ದಾಸವರೇಣ್ಯರಾದರು. ಕನಕದಾಸರ ಅಚಲ-ಶ್ರದ್ಧೆಯ ಸಂಕೇತವಾಗಿ ಉಡುಪಿಯ ಕನಕನ ಕಿಂಡಿ ಇಂದಿಗೂ ಪ್ರಸಿದ್ಧವಾಗಿದೆ. ಬೋಧನಾಪರ ಕೀರ್ತನೆಗಳನ್ನಲ್ಲದೆ, ಕನಕದಾಸರು ರಾಮಧಾನ್ಯ ಚರಿತ್ರೆ, ಮೋಹನತರಂಗಿಣಿ ಎಂಬೆರಡು ಕಾವ್ಯಕೃತಿಗಳನ್ನು ರಚಿಸಿ ದಾಖಲೆ ಸ್ಥಾಪಿಸಿದ್ದಾರೆ. 'ಕಾಗಿನೆಲೆಯಾದಿಕೇಶವ' ಎಂಬುದು ಕನಕ-ದಾಸರ ಅಂಕಿತ.

ಇಂತು ನರಹರಿತೀರ್ಥರಿಂದ ಬೀಜಾರೋಪಣವಾದ ದಾಸಸಾಹಿತ್ಯ ವೃಕ್ಷವು ನಂತರ ಬಂದ ಹರಿದಾಸರೆಲ್ಲರಿಂದ ಬೆಳೆದು ಹೆಮ್ಮರವಾಯಿತು. ಅಮೃತಸಮಾನವಾದ ಫಲ ಧರಿಸಿತು. ಈ ಫಲಗಳನ್ನು ಕರ್ನಾಟಕದ ಜನತೆ ಕಾಲಕಾಲಕ್ಕೆ ಸವಿದು ಆನಂದತುಂದಿಲರಾಗಿದ್ದಾರೆ. ಇದು ದಾಸ-ಸಾಹಿತ್ಯದ ಪ್ರಥಮ ಘಟ್ಟದ ಬೆಳವಣಿಗೆ ಹಾಗೂ ಸಾಧನೆಯಾಯಿತು.

ಪುಣ್ಯಭೂಮಿಯಾದ ಈ ಕರ್ನಾಟಕದಲ್ಲಿ ಇನ್ನೂ ಅನೇಕ ಮಹಾಪುರುಷರು (ದಾಸರು) ಜನಿಸಿ ದಾಸಪರಂಪರೆಯನ್ನು ಮುಂದುವರಿಸಿದರು. ಇವರೆಲ್ಲಾ ದಾಸಪರಂಪರೆಯ ದ್ವಿತೀಯ ಘಟ್ಟಕ್ಕೆ ಸೇರಿದವರಾಗಿದ್ದಾರೆ.

ನರಹರಿತೀರ್ಥರಿಂದ ಮೊದಲುಗೊಂಡು ಕನಕದಾಸರ ವರೆಗೆ ದಾಸ-ಸಾಹಿತ್ಯದ ಪ್ರಥಮ ಘಟ್ಟ ಎನ್ನುವದಾದರೆ, ದ್ವಿತೀಯ ಘಟ್ಟ ಪ್ರಾರಂಭ ವಾಗುವುದು ಮಹಿಪತಿರಾಯರಿಂದಲೇ. ( ಅವರ ಕಾಲ ಸದ್ಯದಮಟ್ಟಿಗೆ ನಿರ್ಣಯಗೊಂಡಂತೆ ೧೬೧೧-೧೬೮೧ ). ಪ್ರಥಮಘಟ್ಟ, ದ್ವಿತೀಯಘಟ್ಟ ಎಂದು ದಾಸಸಾಹಿತ್ಯದಲ್ಲಿ ವಿಂಗಡನೆ ಮಾಡಿಕೊಳ್ಳುವುದು ಕೇವಲ ಅಭ್ಯಾ-ಸದ ಸೌಕರ್ಯಕ್ಕಾಗಿಯೇ ಹೊರತು, ಎರಡೂ ಘಟ್ಟಗಳ ಮಧ್ಯೆ ದಾಸ' ಸಾಹಿತ್ಯ ತಟಸ್ಥವಾಗಿದೆ ಎಂಬರ್ಥವಲ್ಲ. ದಾಸಸಾಹಿತ್ಯವಾಹಿನಿ ಅವ್ಯಾ ಹತವಾಗಿಯೇ ಹರಿದು ಬಂದಿದೆ. ಆದರೆ ದಾಸಸಾಹಿತ್ಯದ ವೈಪುಲ್ಯದ ದೃಷ್ಟಿಯಿಂದ ವಿಜಯದಾಸರ ವರೆಗೆ ದಾಸಸಾಹಿತ್ಯ ಸ್ವಲ್ಪ ಕ್ಷೀಣ-ಗೊಂಡಿತ್ತು ಎಂಬುದರಲ್ಲಿ ಸತ್ಯಾಂಶವಿದೆ.

ದ್ವಿತೀಯ ಘಟ್ಟದ ದಾಸರಲ್ಲಿ ಮಹಿಪತಿರಾಯರ ನಂತರ ವಿಜಯದಾ-ಸರು ಪ್ರಮುಖರು. ಪುರಂದರದಾಸರಿಂದ ಪ್ರೇರಿತರಾಗಿ, ವಿರಾಗಿಗಳಾದರು. ಶ್ರೀಹರಿಯ ಸೇವೆಗಾಗಿ ಶರೀರವನ್ನು ಮುಡುಪಿಟ್ಟರು. ವಿಜಯದಾಸರು ಅನೇಕ ಕೀರ್ತನೆಗಳನ್ನೂ, ತತ್ತ್ವಗರ್ಭಿತವಾದ ಸುಳಾದಿಗಳನ್ನೂ ರಚಿಸಿದ್ದ-ಲ್ಲದೇ, ಅನೇಕ ಜನರಿಗೆ ಹರಿದಾಸ ದೀಕ್ಷೆಯನ್ನಿತ್ತು ದಾಸಪರಂಪರೆಯ ಬಳಗವೊಂದನ್ನು ನಿರ್ಮಿಸಿ ಮುನ್ನಡೆಸಿದರು. ಆದುದರಿಂದ ವಿಜಯದಾಸ ರನ್ನು ದಾಸಪರಂಪರೆಯನ್ನು ಪುನರುಜ್ಜೀವನಗೊಳಿಸಿದ ಮಹಾತ್ಮರೆಂದು ಕರೆಯುವುದುಂಟು. ' ವಿಜಯವಿಠ್ಠಲ ' ಎಂಬ ಅಂಕಿತ ಇವರದು. ಅನೇಕ ತೀರ್ಥ-ಕ್ಷೇತ್ರಗಳನ್ನು ಸಂಚರಿಸಿ ಅಪಾರವಾದ ಲೋಕಾನುಭವವುಳ್ಳ ಅಧ್ಯಾತ್ಮಪುರುಷರು.

ವಿಜಯದಾಸರ ತರುವಾಯದ ಪ್ರಮುಖ ದಾಸರೆಂದರೆ ಅವರ ಶಿಷ್ಯ ರಾದ ಗೋಪಾಲದಾಸರು. ಇವರ ಕಾಲ ಕ್ರಿ. ಶ. ಸು. ೧೭೨೧-೧೭೬೨.

ಭಾಗಣ್ಣ ಎಂಬುದು ಇವರ ಮೊದಲ ಹೆಸರು. " ಭಕ್ತಿಯಲಿ ಭಾಗಣ್ಣ " ಎಂದು ಇವರ ಖ್ಯಾತಿ. "ಗೋಪಾಲವಿಠ್ಠಲ"—ಇವರ ಅಂಕಿತ. ಗೋಪಾಲ ದಾಸರ ತಮ್ಮಂದಿರೂ ದಾಸಪರಂಪರೆಗೆ ಸೇರಿದ್ದರೆಂದು ಹೇಳಲಾಗಿದೆ. ಅನೇಕ ತೀರ್ಥಕ್ಷೇತ್ರಗಳನ್ನು ಸಂಚರಿಸಿ ಎಷ್ಟೋ ಹರಿಸ್ತುತಿಯುಳ್ಳ ಕೀರ್ತ ನೆಗಳನ್ನು ರಚಿಸಿದ್ದಾರೆ. ಗುರುಗಳಾದ ವಿಜಯದಾಸರ ಆಜ್ಞೆಯಮೇರೆಗೆ ಜಗನ್ನಾಥದಾಸರಿಗೆ ನಾಲ್ವತ್ತು ವರ್ಷ ಆಯುಷ್ಯದಾನ ಮಾಡಿದರೆಂದು ಪ್ರತೀತಿ.

ಗೋಪಾಲದಾಸರ ತರುವಾಯ ಅವರ ಶಿಷ್ಯತ್ವ ವಹಿಸಿದ ಜಗನ್ನಾಥ ದಾಸರು ದಾಸಸಾಹಿತ್ಯದಲ್ಲಿ ಗಣ್ಯರು. ಇವರು ಬಾಳಿದ ಕಾಲ ಕ್ರಿ. ಶ. ೧೭೨೮ ರಿಂದ ೧೮೦೯ ಎಂದು ಹೇಳಬಹುದು. ಜಗನ್ನಾಥದಾಸರೂ ಹರಿ-ಸ್ತುತಿಪರವಾದ, ಲೋಕ-ನೀತಿಯುಕ್ತ ಕೀರ್ತನೆಗಳನ್ನು ರಚಿಸಿದ್ದಾರೆ. ಅಲ್ಲದೇ "ಹರಿಕಥಾಮೃತಸಾರ" ಎಂಬ ದ್ವೈತಸಿದ್ಧಾಂತದ ಕೈಪಿಡಿಯಂತಿ-ರುವ ಕಾವ್ಯಕೃತಿಯನ್ನು ರಚಿಸಿದ್ದಾರೆ. ಮಾಧ್ವಮತದ ಅನುಯಾಯಿ ಗಳಿಗೆ ಇದೊಂದು ಅಮೂಲ್ಯ ಆಸ್ತಿಯಾಗಿದೆ. ಜಗನ್ನಾಥದಾಸರ ಮೊದಲು ಮಹಿಪತಿ ಹಾಗು ಪ್ರಸನ್ನ ವೆಂಕಟದಾಸರೂ, ಅವರ ತರುವಾಯ ಹೆಳವನ ಕಟ್ಟಿ ಗಿರಿಯಮ್ಮನೂ ವಿಶೇಷ ಪ್ರಸಿದ್ಧಿ ಪಡೆದಿದ್ದಾರೆ. ಶ್ರೀಹರಿಯನ್ನು ಬಾಲ್ಯರೂಪದಲ್ಲಿಯೋ, ಮುದ್ದು ಕೃಷ್ಣನಾಗಿದ್ದಂತೆಯೋ ಭಾವಿಸಿ ಅನೇಕ ಕೀರ್ತನೆಗಳನ್ನು ಹಾಡಿದ್ದಾರೆ. ಬೆಣ್ಣೆ ಕದಿಯುವಾಗ, ಗೋಪಿಕಾಸ್ತ್ರೀಯ ರೊಡನೆ ಆಡುವಾಗ, ತುಂಟ ಕೃಷ್ಣನಾಗಿ ಸ್ತುತಿಸಲ್ಪಟ್ಟಿದ್ದಾನೆ. ಈ ಮೇಲೆ ವಿವರಿಸಿದ ದಾಸವರೇಣ್ಯರೆಲ್ಲರೂ ಭಾಷೆಯ ದೃಷ್ಟಿಯಿಂದ, ಭಕ್ತಿಯದೃಷ್ಟಿ ಯಿಂದ ತಮ್ಮದೇ ಆದ ವೈಶಿಷ್ಟ್ಯವನ್ನು ಪಡೆದಿದ್ದಾರೆ. ನರಹರಿತೀರ್ಥರಿಂದ ಉದಯಿಸಿದ ದಾಸಸಾಹಿತ್ಯಭಾನು ಹೆಳವನಕಟ್ಟಿ ಗಿರಿಯಮ್ಮನ ವರೆಗೂ ಅವ್ಯಾಹತವಾಗಿ, ದೇದೀಪ್ಯಮಾನನಾಗಿ ಬೆಳಗಿದ್ದಾನೆ. ೧೮ನೆಯ ಶತ-ಮಾನದ ಹೆಳವನಕಟ್ಟಿ ಗಿರಿಯಮ್ಮನನ್ನೂ ಭಾಗವತಸಂಪ್ರದಾಯಕ್ಕೆ ಜೋಡಿಸಿ ಹರಿದಾಸರ ಹೆಸರುಗಳಲ್ಲಿ ಸೇರಿಸುವದು ವಿಹಿತ. "ಹೆಳವನಕಟ್ಟಿ ರಂಗ" ಎಂಬುದು ಇವಳ ಅಂಕಿತವಾಗಿದೆ.

ಈ ವರೆಗೆ ಕರ್ನಾಟಕದ ಪ್ರಮುಖದಾಸರನ್ನು ಕುರಿತು ಪ್ರಾಥಮಿಕ

ವಿವರಣೆಯನ್ನು ಅರಿತಂತಾಯಿತು. ಈಗ ದಾಸರು ಬೋಧಿಸಿದ ನೀತಿ, ದಾಸಸಾಹಿತ್ಯದ ಸ್ವರೂಪಗಳನ್ನು ಕುರಿತು ವಿವೇಚಿಸುವಾ.

ಸಂಗೀತ, ಸಾಹಿತ್ಯ, ಮತಬೋಧನೆ, ನೀತಿಬೋಧೆ, ಸಮಾಜರಚನೆ ಗಳ ವಿಷಯದಲ್ಲಿ ಹರಿದಾಸರು ಮಾಡಿದ ಸೇವೆ ಅಪಾರವಾದುದು. ಸಮಾಜ ದಲ್ಲಿ ನೈತಿಕ ಉನ್ನತಿಯನ್ನು ಸಾಧಿಸುವುದೇ ಎಲ್ಲ ದಾಸರ ಗುರಿಯಾಗಿತ್ತು. ಹೀಗಾಗಿ ಅವರ ಕೀರ್ತನೆಗಳಲ್ಲಿ ಮತಪ್ರಚಾರಕ್ಕಿಂತ ನೀತಿಬೋಧೆ, ಶುದ್ಧಾ ಚರಣೆ, ಹರಿಭಕ್ತಿಸಾಧನೆ ಮುಂತಾದವುಗಳೇ ಪ್ರಮುಖವಾಗಿ ಗೋಚರಿಸು ತ್ತವೆ. ಸಂಗೀತದ ದೃಷ್ಟಿಯಿಂದ ಪುರಂದರದಾಸರು ಕರ್ನಾಟಕ ಸಂಗೀತದ ಪಿತಾಮಹರೆಂದು ಕರೆಯಲ್ಪಡುತ್ತಾರೆ. ವಿವಿಧ ರಾಗ-ತಾಳಗಳಲ್ಲಿ ಇನ್ನಿತರ ಎಲ್ಲ ದಾಸರೂ ಕೀರ್ತನೆಗಳನ್ನು ರಚಿಸಿದ್ದಾರೆ. ಹೀಗಾಗಿ ಈ ಕೀರ್ತನೆ ಗಳಿಂದಾಗಿ ಸಂಗೀತಶಾಸ್ತ್ರವು ಒಂದಿಲ್ಲೊಂದು ರೀತಿಯಲಿ ಕನ ಡ ನಾಡಿನಲಿ ಉಳಿದು ಬಂದಿದೆ.

ಎರಡನೆಯದಾಗಿ ಸಾಹಿತ್ಯ. ಸಾಹಿತ್ಯವು ಸಮಾಜದ ಕೈಗನ್ನಡಿ- ಯೆಂಬಂತೆ ಕರ್ನಾಟಕದ ಹರಿದಾಸರ ಕೀರ್ತನೆಗಳಲ್ಲಿ ಅಂದಿನ ಸಮಾಜ ಚಿತ್ರಣ ದೊರೆಯುತ್ತದೆ. ಪದಸಂಯೋಜನೆ, ಪ್ರಾಸಗಳ ನಿಯತವಾದ ಪರಿಪಾಲನೆಗಳಿಂದಲೂ, ಅಲಂಕಾರಗಳ ಹಿತಮಿತವಾದ ಔಚಿತ್ಯಪೂರ್ಣ ಬಳಕೆಯಿಂದಲೂ ಹರಿದಾಸ ವಿರಚಿತ ಕೀರ್ತನೆಗಳು ಉಚ್ಚ್ಯಮಟ್ಟದವಾಗಿವೆ. ಉದಾಹರಣೆಗೆ ಪುರಂದರದಾಸರ, "ಭಾಗ್ಯದ ಲಕ್ಷ್ಮೀ ಬಾರಮ್ಮಾ" ಎಂಬಂತಹ ಕೀರ್ತನೆಗಳನ್ನು ವೀಕ್ಷಿಸಿದರೆ ಮೇಲಿನ ಹೇಳಿಕೆಯು ಸರಿಯೆನಿಸು ತ್ತದೆ. ಅದರಂತೆ ಇತರ ದಾಸರ ಕೀರ್ತನೆಗಳನ್ನೆಲ್ಲಾ ನೋಡಬಹುದು. "ಕನ್ನಡಿಯೊಳಗಿನ ಗಂಟು ಕಂಡು ಕಳ್ಳ ಕನ್ನವಿಕ್ಕಲು ಅವನ ವಶವಹುದೇ" ಎಂಬಲ್ಲಿ ಸುಂದರ ಕಲ್ಪನೆಯನ್ನು ಕಾಣುತ್ತೇವೆ. ಕೆಲವು ಕೀರ್ತನೆಗಳು ಒಗಟಿನಂತೆಯೂ ಇವೆ. ಮೂರು, ಐದು,ಏಳು ಇತ್ಯಾದಿ ನುಡಿಗಳನ್ನು ಹೊಂದಿದ ಕೀರ್ತನೆಗಳು ಚಿಕ್ಕ ಚಿಕ್ಕ ವಿಶ್ವಕೋಶದಂತಿವೆ. ಶ್ಲೇಷಾರ್ಥ ವುಳ್ಳ ಕೀರ್ತನೆಗಳೂ ಅನೇಕ ಇವೆ. ಇವು ಆಬಾಲವೃದ್ಧರೆಲ್ಲರಿಗೂ ಅವ ರದೇ ಆದ ತಿಳಿವಳಿಕೆಯ ಮಟ್ಟಕ್ಕನುಸಾರವಾಗಿ ಅರ್ಥವಾಗುತ್ತವೆ. ರಸದ ದೃಷ್ಟಿಯಿಂದ ಹರಿದಾಸಕೀರ್ತನೆಗಳಲ್ಲಿ ಭಕ್ತಿರಸಕ್ಕೆ ಪ್ರಥಮಸ್ಥಾನ.

ಕ್ವಚಿತ್ತಾಗಿ ಭೀಭತ್ಸ, ವೀರರಸಾದಿಗಳು ಬಳಸಲ್ಪಟ್ಟಿವೆ. ಛಂದಸ್ಸಿನ ದೃಷ್ಟಿಯಿಂದ ಪದ, ಸುಳಾದಿ, ಉಗಾಭೋಗ, ತತ್ವ ಸುವ್ವಾಲಿ, ಸೀಸಪದ್ಯ, ದ್ವಿಪದಿ, ಷಟ್ಪದಿ, ರಗಳೆ, ಯಾಲಪದ್ಯ, ಸಾಂಗತ್ಯ ಮೊದಲಾದ ಛಂದೋ ರೂಪಗಳನ್ನು ಕಾವ್ಯದಲ್ಲಿ ಬಳಸಿದ್ದಾರೆ. ಕೆಲವರು ಸುಲಭವಾದ ಕನ್ನಡ ಛಂದಸ್ಸಿನಲ್ಲಿಯೇ ಉದ್ಗ್ರಂಥಗಳನ್ನು ರಚಿಸಿದ್ದಾರೆ. ( ಉದಾ : ಹರಿ ಕಥಾಮೃತಸಾರ, ಮೋಹನತರಂಗಿಣಿ— ಇ. )

ಕೆಲವು ಕೀರ್ತನೆಗಳು ಸಂಸ್ಕೃತ ಸುಭಾಷಿತಗಳ ಪಡಿನೆಳಲು ಎನಿಸಿ ದರೂ ಅವುಗಳಲ್ಲಿಯ ಭಾಷಾಮಾಧುರ್ಯ, ಕಲ್ಪನಾವಿಲಾಸ, ದೃಷ್ಟಾಂತದ ಸೊಗಸು, ದೇಸೀ ಬಳಕೆ ಮೆಚ್ಚುತಕ್ಕವುಗಳಾಗಿವೆ. ಅಂತೆಯೇ ಪಂಪ, ರನ್ನ, ಕುಮಾರವ್ಯಾಸಾದಿಗಳ ಪರಿಚಯದ ಗಂಧವೂ ಇರದ ಕನ್ನಡಿಗನು ಸಹ, ಇಂದಿಗೂ ಸಲೀಸಾಗಿ ದಾಸರ ಕೀರ್ತನೆಗಳನ್ನು ಗುನುಗುನಿಸು ತ್ತಾನೆ.

ಮತಬೋಧನೆಯ ದೃಷ್ಟಿಯಿಂದ ವಿಚಾರಿಸಲು ಹರಿದಾಸರ ಕೀರ್ತನೆ ಗಳಲ್ಲಿ ಸಾಮಾನ್ಯವಾಗಿ ಮಧ್ವಮತ ತತ್ತ್ವಗಳು ಅಳವಟ್ಟಿರುವುದು ನಿಜ. ಆದರೆ ಕೇವಲ ಮಧ್ವಮತಪ್ರಸಾರಕ್ಕಾಗಿಯೇ ಬರೆದವುಗಳೆಂದಲ್ಲ. ಈ ಮಾತನ್ನು ಲಕ್ಷ್ಯದಲ್ಲಿಡತಕ್ಕದ್ದು. ಮಾಧ್ವಮತ-ತತ್ತ್ವಗಳನ್ನು ಹೊಂದಿವೆ ಯೆಂದ ಮಾತ್ರಕ್ಕೆ ಮಧ್ವಮತ ಪ್ರಸಾರವೆಂದು ತಿಳಿಯುವುದು ಉಚಿತವೆನಿಸ ಲಾರದು. ಒಟ್ಟಿನಲ್ಲಿ ವಿಠ್ಠಲನನ್ನೋ, ಶ್ರೀಹರಿಯನ್ನೋ ಆರಾಧ್ಯದೈವತ ವನ್ನಾಗಿಟ್ಟುಕೊಂಡು ಶಿವಾದಿ ಎಲ್ಲ ದೈವತಗಳನ್ನೂ ಕುರಿತು ದಾಸರು ಕೀರ್ತನೆಗಳನ್ನು ರಚಿಸಿದ್ದುಂಟು. ಶರಣರ ವಚನಗಳು ಮಾತನಾಡಿದ ಹಾಗೆ ಇದ್ದರೆ, ದಾಸರ ಕೀರ್ತನೆಗಳು ಹಾಡಿದ ಹಾಗಿವೆಯೆಂದು ವಿಮರ್ಶ ಕರು ಅಭಿಪ್ರಾಯಪಟ್ಟಿದ್ದಾರೆ. ಯಾವುದೇ ಮತವಿರಲಿ, ವೈಯಕ್ತಿಕ ಚಾರಿತ್ರ್ಯ ( ಶೀಲ ) ಮಹತ್ವದ್ದೆಂಬುದನ್ನು ದಾಸರು ಸಾರಿದ್ದಾರೆ.

ಹರಿದಾಸರ ನೀತಿಬೋಧೆ ಅಗಾಧವಾದದ್ದಾಗಿದೆ. ಭಕ್ತಿಯಲ್ಲಿ ನವ- ವಿಧ ಭಕ್ತಿಯ ಮಹಿಮೆಯನ್ನು ಸಾರಿದ ದಾಸರು ಆದರ್ಶ ನೀತಿಬೋಧಕ- ರಾಗಿದ್ದಾರೆ. ತಮ್ಮ ಜೀವಿತದ ಕಾಲದಲ್ಲಿ ಸಮಾಜದಲ್ಲಿ ನಡೆದ ಅನ್ಯಾಯ, ಅನೀತಿಗಳನ್ನು ಬಲವಾಗಿ ಖಂಡಿಸಿದ್ದಾರೆ. 'ಸ್ಥಿರವಲ್ಲದ ಈ ಕಾಯವನ್ನು

ನಂಬಿ ಕೆಡಲು ಬೇಡ. ಮಾನವ ಜನ್ಮವು ದೊಡ್ಡದು ಇದನ್ನು ಹಾನಿಮಾಡಿ ಕೊಳ್ಳಲು ಬೇಡಿ' ಎಂದು ಎಚ್ಚರಿಕೆಯಿತ್ತಿದ್ದಾರೆ. ಹರಿಸೇವೆಗಾಗಿ ಈ ಜನ್ಮ ವನ್ನು ಮುಡುಪಾಗಿಟ್ಟು ಹರಿಪದ ಸೇರಬೇಕೆಂಬುದೇ ದಾಸವರೇಣ್ಯರ ಬಲ ವಾದ ಬಯಕೆ. ದಂಡಿಗೆ, ಬೆತ್ತಗಳನ್ನು ಧರಿಸಿದ ದಾಸರು ವೈರಾಗ್ಯಜೀವಿ ಗಳು. ಗೋಪಾಳಬುಟ್ಟಿಯು ನಿರಭಿಮಾನದ ಸಂಕೇತ. ತುಲಸೀಮಾಲೆ ಹರಿಯ ಸಾನ್ನಿಧ್ಯವನ್ನು ಪಡೆಯಲು ಪರಮ ಸೋಪಾನ. ಆದ್ದರಿಂದ ದಾಸರು ಆಡಂಬರದ ಕಪಟ ಭಿಕ್ಷುಗಳಲ್ಲ, ತಿರಿದುಂಡರೂ ಸಮಾಧಾನಿಗಳು; ತಿರುಕ-ರಂತಿದ್ದರೂ ರಾಜಭೋಗಿಗಳು; ಎಂಥ ವಿಪತ್ತು ಒದಗಿದರೂ "ಬಂದದ್ದೆಲ್ಲಾ ಬರಲಿ, ಗೋವಿಂದನ ದಯ ನಮಗಿರಲಿ" ಎಂಬ ಸಂಯಮಶೀಲರು. ಪರಮಪುರುಷರು

ಸಂಸಾರಕೂಪದಲ್ಲಿ ಬಿದ್ದು ತೊಳಲುತ್ತಿರುವವರನ್ನು ಉದ್ದೇಶಿಸಿ ಎಲ್ಲಾ ದಾಸರು ಮಿತ್ರಸಮ್ಮಿತ ಉಪದೇಶ ಮಾಡಿದ್ದಾರೆ. ಕನಿಕರದಿಂದ ಮರುಗಿದ್ದಾರೆ. ಈ ಹೇಸಿಯಾದ ಸಂಸಾರದಿಂದ ಓಡಿಹೋಗು, ಸನ್ಯಾಸಿ ಯಾಗಿ ಕಠೋರ ತಪವನ್ನಾಚರಿಸು ಎಂದು ಯಾವ ದಾಸರೂ ಹೇಳಿಲ್ಲ, ನಿರಾಶಾವಾದವನ್ನು ಸರ್ವಥಾ ಬೋಧಿಸಿಲ್ಲ. ಅದಕ್ಕೆ ಬದಲಾಗಿ "ಈಸಬೇಕು ಇದ್ದು ಜಯಿಸಬೇಕು", "ಮಾನವ ಜನ್ಮ ದೊಡ್ಡದು ಇದು ಹಾನಿಮಾ ಡಲು ಬೇಡಿ, ಹುಚ್ಚಪ್ಪಗಳಿರಾ" ಎಂಬ ಹಿತವಾದ ಆಶಾದಾಯಕ ನುಡಿ ಗಳನ್ನಾಡಿದ್ದಾರೆ. ಸತ್ಯ, ಸದ್ವರ್ತನೆ, ಸಚ್ಚಾರಿತ್ರ್ಯ, ನಿರಹಂಕಾರ, ನಿರಾಡಂಬರ ಜೀವನ ಮುಂತಾದ ಸದ್ಗುಣಗಳೇ ನಮ್ಮ ಜೀವನಕ್ಕೆ ಬೆಳಕು ಬೀರಬಲ್ಲ ಸುಲಭ ಸಾಧನಗಳು ಎಂದು ಸಾರಿದ್ದಾರೆ. ಜೀವನಕ್ಕೆ ಒಂದು ಅರ್ಥವನ್ನು ಕೋರಿ, ಸಾರ್ಥಕ ಜೀವನ ಬಾಳಲು ಸಂಸಾರಿಕರನ್ನು ಹುರಿ ದುಂಬಿಸಿದ್ದಾರೆ.

ಮಾನವನು ಸಮಾಜಜೀವಿ. ಆತನು ಇತರರೊಡನೆ ಹೇಗೆ ಸಹಕಾರ ದಿಂದ ಬಾಳಬೇಕು, ಬದುಕಬೇಕೆಂಬುದನ್ನು ದಾಸರು ಪುನಃ ಪುನಃ ನುಡಿದಿ ದ್ದಾರೆ. ಅನುಭಾವಿಗಳಾದ ದಾಸರ ಕೀರ್ತನೆಗಳು ನೀತಿಯ ನೆಲೆಗಟ್ಟಿನ ಮೇಲೆ ನಿಂತಿವೆ. ಸುಲಲಿತವಾದ ಭಾಷೆಯನ್ನು ಹೊಂದಿವೆ. ತಂದೆಯ ಸ್ಥಾನದಲ್ಲಿದ್ದುಕೊಂಡು, ತಾಯಿಯ ಸ್ಥಾನದಲ್ಲಿದ್ದುಕೊಂಡು ಮಕ್ಕಳೊಂದಿಗೆ ಯಾವ ರೀತಿ ವರ್ತಿಸಬೇಕೆಂಬುದನ್ನೂ, ಜನ್ಮಪಿತ್ತ ತಂದೆ-ತಾಯಿಗಳಿಗೆ

ಮಕ್ಕಳು ಸಲ್ಲಿಸಬೇಕಾದ ಪ್ರೀತಿ, ಗೌರವಗಳನ್ನು ಕುರಿತೂ ದಾಸರು ಮಾರ್ಮಿಕವಾಗಿ ನುಡಿದಿದ್ದಾರೆ.

ಸ್ತ್ರೀಜೀವನವನ್ನು ದಾಸರಷ್ಟು ಸೂಕ್ಷ್ಮವಾಗಿ ವಿಶ್ಲೇಷಿಸಿದವರು ಮತ್ತಾರೂ ಇಲ್ಲವೆಂದು ದೃಢವಾಗಿ ಹೇಳಬಹುದು. ತಾಯಿಯಾಗಿ, ಮಡದಿಯಾಗಿ, ಸೊಸೆಯಾಗಿ, ಮಗಳಾಗಿ, ಅಕ್ಕ-ತಂಗಿಯಾಗಿ, ಈ ಎಲ್ಲ ಪಾತ್ರವನ್ನು ಅವಳು ವಹಿಸುವ ಹೊಣೆಗಾರಳಾದ್ದರಿಂದ ಅವಳ ಕರ್ತವ್ಯ ನಿರ್ವಹಣೆಯನ್ನು ಕುರಿತು ದಾಸರು ಹೃದ್ಯವಾಗಿ ಉಪದೇಶಗೈದಿದ್ದಾರೆ. ಈಗಿನಂತೆ ಅಂದಿನ ಸಮಾಜವೂ ಅನೇಕ ದೋಷಗಳನ್ನು ಹೊಂದಿರಬೇಕು. ಧರ್ಮದ ಹೆಸರಿನಲ್ಲಿ ಭ್ರಷ್ಟಾಚಾರವನ್ನೆಸಗುವ ಧರ್ಮಗುರುಗಳೂ, ಕೇವಲ ಬೆಳ್ಳಿ-ಬಂಗಾರದ ಪ್ರತಿಮೆಗಳನ್ನು ಪೂಜಿಸುವಂಥ ಡಾಂಭಿಕರೂ ಇದ್ದಿರಬೇಕು. ಮಡಿಯ ಹೆಸರಿನಲ್ಲಿ ಪ್ರತಿಷ್ಠೆಯನ್ನು ಸ್ಥಾಪಿಸಿಕೊಂಡ ಆಚಾರವಂತರೂ ಇರಬೇಕು. ಇವರನ್ನೆಲ್ಲಾ ಉದ್ದೇಶಿಸಿ ದಾಸರು ಇವೆಲ್ಲಾ ಉದರ ವೈರಾಗ್ಯವೆಂದು ಖಂಡಿಸಿದ್ದಾರೆ. ಅದನ್ನು ತೊರೆಯಲು ಸಲಹೆ ಮಾಡಿದ್ದಾರೆ.

ಸಮಾಜೋದ್ಧಾರದ ಕಾರ್ಯದಲ್ಲಿ ನಿರತನಾದವನಿಗೆ ಅನೇಕ ಎಡರು ತೊಡರುಗಳು, ಸಮಸ್ಯೆಗಳು ಎದುರಾಗುವುದು ಸಹಜ. ಅದರಂತೆ ಹರಿದಾಸರನ್ನೂ ಅನೇಕರು ನಿಂದಿಸಿ ನುಡಿದಿರಬೇಕು. ಈ ಮಾತು ದಾಸರ ಕೆಲವು ಕೀರ್ತನೆಗಳಿಂದ ವಿದಿತವಾಗುತ್ತದೆ. ಆದರೂ ಆತ್ಮೋದ್ಧಾರದೊಂದಿಗೆ, ಜನಸೇವೆಗಾಗಿ ಬದ್ಧಕಂಕಣರಾದ ಹರಿದಾಸರು "ಸಕಲವೆಲ್ಲವೂ ಹರಿಸೇವೆ" ಎಂದು ಧೈರ್ಯದಿಂದ ಎಲ್ಲವನ್ನೂ ಸಹಿಸಿದರು.

'ನಾನು ಮೇಲು-ನೀನು ಕೀಳು' ಎಂಬ ಸಂಘರ್ಷದಿಂದ ಕೂಡಿದ ಅಂದಿನ ಸಮಾಜದ ಜನರಿಗೆ "ಕುಲ ಕುಲವೆಂದು ಬಡಿದಾಡದಿರಿ. ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ ?" ಎಂದು ಪ್ರಶ್ನಿಸಿದ್ದಾರೆ. ರಾಮಾಯಣ-ಮಹಾಭಾರತಗಳಿಂದಲೋ ಅಥವಾ ಪುರಾಣ-ಪುಣ್ಯಕತೆಗಳಿಂದಲೋ ಪರಿಣಾಮಕರವಾದ ಉದಾಹರಣೆಗಳನ್ನೆತ್ತಿಕೊಂಡು, ದುರ್ಮಾರ್ಗಿಯಾದವನಿಗೆ ಒದಗುವ ದುರ್ಗತಿಯನ್ನು ಕುರಿತು ಒಂದೆಡೆ ಹಾಡಿದರೆ, ಸನ್ಮಾರ್ಗದಲ್ಲಿ ನಡೆದವನ ಸುಖಮಯ ಜೀವನವನ್ನು ಕುರಿತು ಮತ್ತೊಂದೆಡೆಗೆ ಹಾಡಿ

ದ್ದಾರೆ. ಭುಜಬಲ, ಧನಬಲ, ಸೈನ್ಯಬಲವಿದ್ದ ದುರ್ಯೋಧನ, ರಾವಣರು ದುರ್ಮಾರ್ಗದಿಂದ ಮಣ್ಣುಮುಕ್ಕಿ ಹೋದರೆಂದಾಗ ನಿನ್ನಂಥ ಬಡಪಾಯಿಯ ಗತಿಯೇನು ?— ಎಂದಿದ್ದಾರೆ.

ಜನಸಾಮಾನ್ಯನಿಗೆ ಕಬ್ಬಿಣದ ಕಡಲೆಯಾದ ವೇದ, ಶಾಸ್ತ್ರ, ಪುರಾಣಗಳೊಳಗಣ ನೀತಿಸುಧೆಯನ್ನು ದಾಸರ ಕೀರ್ತನೆಗಳು ಸುಲಭವಾಗಿ ಒದಗಿಸುತ್ತವೆ. ಮಾನವನನ್ನು ದಾನವನನ್ನಾಗಿಸದೇ, ದೈವತ್ವಕ್ಕೇರಿಸುವುದೇ ಹರಿದಾಸರ ಕೀರ್ತನೆಗಳ ಉದ್ದೇಶ.

## ಉಪಸಂಹಾರ

ಕರ್ನಾಟಕದಲ್ಲಿ ನೂರಾರು ಜನ ದಾಸರು ಆಗಿಹೋದರೂ ಅವರಲ್ಲಿ ವಿಶೇಷ ಮಹತ್ವವುಳ್ಳವರು ಕೇವಲ ಹತ್ತು-ಹದಿನೈದು ಜನ ಮಾತ್ರ. ದಾಸಸಾಹಿತ್ಯದ ಅಭ್ಯಾಸ ಮಾಡಬೇಕೆಂಬ ಕುತೂಹಲಿಗಳಾದ ಕನ್ನಡಿಗರಿಗೆ ಈ ಪ್ರಮುಖದಾಸರನ್ನು ಬಿಟ್ಟರೆ ಗತಿಯಿಲ್ಲ. ವಿಶೇಷ ಪ್ರಚಾರದಲ್ಲಿರುವ ವ್ಯಾಸರಾಯರು, ಪುರಂದರರು, ಕನಕದಾಸರು, ವಿಜಯದಾಸರು, ಜಗನ್ನಾಥದಾಸರು, ಗೋಪಾಲದಾಸರು, ಮುಂತಾದವರ ಕೃತಿಗಳು ಕನ್ನಡಿಗರ ಮನವನ್ನು ಸೂರೆಗೊಂಡಿವೆ. " ಹರಿದಾಸರು " ಎಂಬ ಪದವೇ ಸೂಚಿಸುವಂತೆ ಇಲ್ಲಿ ದಾಸ್ಯಭಾವಕ್ಕೆ ಅಗ್ರಸ್ಥಾನವಿದೆ.

ದಾಸರು ತಮ್ಮ ಕೀರ್ತನೆಗಳನ್ನು ಎಲ್ಲಿಯೂ ಬರೆದಿಡಲಿಲ್ಲ. ಸಂಚಾರೀ ಜೀವನಾನುಭವದ ತಾಣದಲ್ಲಿ ಒಂದೊಂದು ನುಡಿಮುತ್ತು ಚೆಲ್ಲಿದ್ದಾರೆ. ಅವರ ಭಕ್ತರಲ್ಲಿ ಕೆಲವರು ಈ ನುಡಿಮುತ್ತುಗಳನ್ನು ಸಂಗ್ರಹಿಸಿದರು. ಹೀಗಾಗಿ ಲಿಪಿಕಾರರ ಅಲ್ಪಮತಿಯಿಂದಾಗಿಯೋ, ಅರ್ಧಜ್ಞಾನದಿಂದಾಗಿಯೋ, ಮರೆವಿನಿಂದಾಗಿಯೋ ಅಲ್ಲಲ್ಲಿ ಸ್ಖಾಲಿತ್ಯಗಳು ಇನ್ನೂ ಉಳಿದುಕೊಂಡಿವೆ. ಮತ್ತೆ ಕೆಲವೆಡೆ ಬೇರೆ ಯಾರೋ ಗೀತೆಗಳನ್ನು ರಚಿಸಿ ದಾಸರ ಹೆಸರಿನಲ್ಲಿ ಸೇರಿಸಿರಲೂಬಹುದು. ದಾಸವರೇಣ್ಯರು ಜನಿಸಿದ ನಾಡಿನಲ್ಲಿಯೇ ಜನಿಸುವ ಭಾಗ್ಯವಂತರಾದ ನಾವೆಲ್ಲಾ ದಾಸರ ಕೀರ್ತನೆಗಳನ್ನು ಆಳವಾಗಿ ಅಭ್ಯಸಿಸಿ ಸ್ಖಾಲಿತ್ಯಗಳನ್ನು ಹೊಡೆದೋಡಿಸಿ ಪರಿಷ್ಕರಿಸಬೇಕು. ಅನುಷ-

ಲಬ್ಧವಾಗಿ ಎಲ್ಲಿಯೋ ಗೆದ್ದಿಲುಗಳಿಗೆ ಆಹಾರವಾಗಿ ನಶಿಸಿ ಹೋಗುತ್ತಿರುವ ದಾಸಸಾಹಿತ್ಯವನ್ನು ಸಂಶೋಧಿಸಬೇಕು. ಹೀಗೆ ಮಾಡಿದರೆ ದಾಸರ ಸೇವೆಯನ್ನು ಮಾಡಿದಂತಾಗುತ್ತದೆ; ಮಾತ್ರವಲ್ಲದೇ ಹಾಳಾಗಿ ಹೋಗುವ ಆ ತವನಿಧಿಯನ್ನು ಉಳಿಸಿದಂತೆಯೂ ಆಗುತ್ತದೆ. ಈ ದಿಸೆಯಲ್ಲಿ ಹಿರಿಯ ಸಾಹಿತಿಗಳಾದ ಡಾ|| ಬೆಟಗೇರಿ ಕೃಷ್ಣಶರ್ಮರು ಹಾಗೂ ರಂಗನಾಥ ದಿವಾಕ-ರರು ಮಾರ್ಗ ಹಾಕಿಕೊಟ್ಟಿದ್ದಾರೆ. ಈ ಪೂಜ್ಯರ ಮಾರ್ಗದರ್ಶನದಲ್ಲಿ ಇಂದಿನ ತರುಣಜನಾಂಗ ಸಾಗಿದರೆ ಕಾರ್ಯ ಸುಲಭವಾಗುತ್ತದೆ. ಇಂದು ಅನೇಕ ವಿಶ್ವವಿದ್ಯಾನಿಲಯುಗಳು, ಶಿಕ್ಷಣ ಸಂಸ್ಥೆಗಳು, ಸಾಹಿತ್ಯಾಭ್ಯಾಸಿಗಳು, ದಾಸಸಾಹಿತ್ಯದ ಸಂಶೋಧನೆ ಮಾಡುತ್ತಲಿದ್ದಾರೆ. ಇದು ಕನ್ನಡಿಗರಿಗೆ ಹೆಮ್ಮೆಯ ವಿಷಯ.

ಶ್ರೀ ದಾಸಗುರುಭ್ಯೋ ನಮ:



# ಶ್ರೀ ವಿಜಯದಾಸರು

## (ಜೀವನ ಚರಿತ್ರೆ)

"ಅಜ್ಞಾನ ತಿಮಿರಾದಿತ್ಯಂ ಆತ್ಮಾನಂದ ಪದಪ್ರದಂ |
ವಿಜ್ಞಾನ ವಿಮಲಂ ಶ್ರೇಷ್ಠಂ ವಿಜಯಾರ್ಯ ಗುರುಂ ಭಜೆ ||

ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನ ಚೀಕಲಪರಿ ಎಂಬ ಗ್ರಾಮ ಶ್ರೀ ವಿಜಯದಾಸರ ಜನ್ಮಸ್ಥಳ ಇದು ಮಾನ್ವಿಯಿಂದ ಎಂಟು ಮೈಲು ದೂರದಲ್ಲಿದೆ. ಶ್ರೀಪಾದರಾಜರಿಂದ ಸ್ಥಾಪಿತವಾದ ಅಶ್ವತ್ಥ ನರಸಿಂಹಕ್ಷೇತ್ರವೆಂದು ಪ್ರಸಿದ್ಧಿ ಪಡೆದಿದೆ. ವಿಜಯದಾಸರು ಕ್ರಿ. ಶ. ೧೬೮೭ರಲ್ಲಿ ಜನಿಸಿದರು.* ತಂದೆ ಶ್ರೀನಿವಾಸಪ್ಪ, ಬಡಬ್ರಾಹ್ಮಣ. ತಾಯಿಯ ಹೆಸರು ಕೂಸಮ್ಮ. ಶ್ರೀ ಅಶ್ವತ್ಥನರಸಿಂಹ ಸ್ವಾಮಿಯ ಅನುಗ್ರಹದಿಂದ ಈ ಬಡಬ್ರಾಹ್ಮಣ ದಂಪತಿಗಳಿಗೆ ಮೂವರು ಮಕ್ಕಳಾದರು. ಇವರಲ್ಲಿ ಹಿರಿಯವನೇ ದಾಸಪ್ಪ. ಬಡತನ ಹಾಗೂ ಹಳ್ಳಿಯ ವಾಸ್ತವ್ಯದಿಂದಾಗಿ ದಾಸಪ್ಪನಿಗೆ ಹೆಚ್ಚಿನ ವಿದ್ಯಾಭ್ಯಾಸವಾಗಲಿಲ್ಲ. ಬಾಲ್ಯದಲ್ಲಿಯೇ ಕಡು ಬಡ-ತನದ ಬವಣೆಯನ್ನು ಎದುರಿಸಬೇಕಾಯಿತು. ಒಪ್ಪತ್ತಿನ ಊಟಕ್ಕೂ ಸಹ ಗತಿಯಿಲ್ಲದಂಥ ಪರಿಸ್ಥಿತಿ ದಾಸಪ್ಪನದಿತ್ತು. ಈತನ ಕಡುಬಡತನ ಹಾಗೂ ದಡ್ಡತನಗಳನ್ನು ಅಣಕಿಸಿ ಎಷ್ಟೋವೇಳೆ ಅವನನ್ನು "ಕೂಸಿಮಗದಾಸ" ಎಂದು ಜನರು ಹೀಯಾಳಿಸಿದ್ದೂ ಉಂಟು. ಜನರ ಈ ಹೀಯಾಳಿಕೆ ಹಾಗೂ ಅವಮಾನವನ್ನು ಸಹಿಸಲಾರದೇ ದಾಸಪ್ಪನು ಚಿಕ್ಕಂದಿನಲ್ಲಿಯೇ ಮನೆ-ಮಾರು ತೊರೆದು ಕಾಶಿಗೆ ಬಂದನು. ಆ ಪುಣ್ಯಕ್ಷೇತ್ರದಲ್ಲಿ ವಾಸವಾಗಿದ್ದ ಎಷ್ಟೋ ಬೈರಾಗಿಗಳ ಸಹವಾಸವು ಉಂಟಾಯಿತು. ಪವಿತ್ರ

---

* ವಿಜಯದಾಸರ ಮೊದಲಿನ ಹೆಸರು ದಾಸಪ್ಪ ಎಂದಿತ್ತು.

ಅಶ್ವತ್ಥನರಸಿಂಹಸ್ವಾಮಿಯ ಸಾನ್ನಿಧ್ಯದಿಂದಲೂ, ತುಂಗಭದ್ರಾನದಿಯಿಂದಲೂ ಮೊದಲೇ ಪವಿತ್ರವೆನಿಸಿದ್ದ ಅವರ ಜನ್ಮಭೂಮಿಯ ಮಹಿಮೆ ಈಗ ಮಿಗಿಲಾಯಿತು. ದಾಸಪ್ಪನು ವಿಜಯದಾಸನಾಗಿ ಬಂದುದನ್ನು ಕಂಡಬಂಧುಜನರು ಪರಮಾನಂದಭರಿತರಾದರು. ಎಲ್ಲರಿಗಿಂತಲೂ, ಮುಖ್ಯವಾಗಿ ಅರಳಮ್ಮನಿಗೆ ಜ್ಞಾನಿಯಾದ ಪತಿಯನ್ನು ಕಂಡು ಕಾಮಧೇನುವನ್ನು ಪಡೆದಷ್ಟು ಪರಮಾನಂದವಾಯಿತು. ಕಾಲಾಂತರದಲ್ಲಿ ವಿಜಯದಾಸರಿಗೆ ಇಬ್ಬರು ಮಕ್ಕಳಾದರು. ಒಬ್ಬನ ಹೆಸರು ಶೇಷಗಿರಿದಾಸನೆಂದಿದ್ದಿತೆಂದು ತಿಳಿಯುತ್ತದೆ.

ಶ್ರೀ ವಿಜಯದಾಸರು ಭೃಗುಋಷಿಗಳ ಅವತಾರವೆಂದು ಅನೇಕ ಹರಿದಾಸರು ಆಪ್ತವಾಕ್ಯದಲ್ಲಿ ಹೇಳಿದ್ದುಂಟು. ವಿಜಯದಾಸರ ತಮ್ಮ, ಆನಂದದಾಸರು ದಾಸವರ್ಯರ ಸಂಕ್ಷಿಪ್ತ ಚರಿತ್ರೆಯನ್ನು ಉದಯರಾಗದಲ್ಲಿ ಹಾಡಿದ್ದಾರೆ.

ಕಲ್ಲೂರು ಎಂಬ ಗ್ರಾಮದಲ್ಲಿ ಆ ಕಾಲದಲ್ಲಿ ಸುಬ್ಬಣಾಚಾರ್ಯರೆಂಬ ಸುಧಾ ಪಾಠಕರೊಬ್ಬರಿದ್ದರು. ಸುಧಾಮಂಗಳದ ಕಾಲದಲ್ಲಿ ಸಾವಿರಾರು ಜನರ ಸಮಾರಾಧನೆಯಾಗುತ್ತಿತ್ತು. ಈ ಕಾಲಕ್ಕೆ ಗೊತ್ತು ಪಡಿಸಿದ್ದ ಅಡಿಗೆಯವನು ಅಸ್ವಾಸ್ಥ್ಯದಿಂದಾಗಿ ಬರಲಿಲ್ಲ. ಇಂಥ ಪ್ರಸಂಗದಲ್ಲಿ ಸ್ವತಃ ವಿಜಯದಾಸರೇ ಅಡುಗೆಯವನ ರೂಪತಾಳಿ ಎಲ್ಲ ಜನರನ್ನೂ ಮೃಷ್ಟಾನ್ನಗಳಿಂದ ತೃಪ್ತಪಡಿಸಿದರು. ಈ ಅಡುಗೆಯವನು ವಿಜಯದಾಸರೇ ಎಂದು ಕೆಲ ಜನರಿಗೆ ಗೊತ್ತಾಯಿತು. 'ಏನು ಸ್ವಾಮಿ ! ತಮ್ಮಂಥವರಿಗೆ ತೊಂದರೆ ಕೊಟ್ಟಂತಾಯಿತಲ್ಲ' ಎಂದಾಗ, 'ಅದರಲ್ಲೇನು ಇದೂ ಒಂದು ರೀತಿಯ ಹರಿಸೇವೆ ಎಂದು ನುಡಿದರು.'

ಇದೇ ಪ್ರಸಂಗದಲ್ಲಿ ನೀರು ತರುತ್ತಿದ್ದ ಅಜ್ಞಾನಿಯಾದ ಪರಿಚಾರಕನಿಂದ ಕೇವಲ ಸ್ಪರ್ಶಮಾತ್ರದಿಂದಲೇ ತುಂಬಿದ ಸಭೆಯಲ್ಲಿ ಸುಧಾನುವಾದ ಮಾಡಿಸಿದರು.

ಸಂಚರಿಸುತ್ತ ವಿಜಯದಾಸರು ಬಳ್ಳಾರಿಜಿಲ್ಲೆಯ ಗುಂತಕಲ್ಲಿನ ಸಮೀಪದಲ್ಲಿರುವ ಚಿಪ್ಪಗಿರಿಗೆ ಬಂದರು. ತೆಲಗುಭಾಷೆಯ ಪ್ರಭಾವವೇ ತುಂಬಿದ್ದ ಈ ಸ್ಥಾನದಲ್ಲಿ ಅನೇಕ ಕನ್ನಡ ಕೀರ್ತನೆಗಳನ್ನು ರಚಿಸಿದರು.

ಜನರನ್ನು ಭಕ್ತಿ, ಜ್ಞಾನ, ಹರಿಯ ಸೇವೆಯತ್ತ ಜಾಗೃತಗೊಳಿಸಿದರು. ಚಿಪ್ಪಗಿರಿಯಲ್ಲಿ ತಂಗಿರುವಾಗಲೇ ಅನೇಕ ಸುಳಾದಿಗಳನ್ನೂ, ಎಷ್ಟೋ ಕೀರ್ತನೆಗಳನ್ನೂ ರಚಿಸಿದರು. ಚಿಪ್ಪಗಿರಿಯಲ್ಲಿಯೇ ವಿಜಯದಾಸರು ಕ್ರಿ. ಶ. ೧೭೫೫ರಲ್ಲಿ ಭಗವದುಪಾಸನೆಯಿಂದ ಭಗವದಪರೋಕ್ಷಿಗಳಾದರು. ಈ ವಿಜಯದಾಸರ ಸಮಾಧಿಯ ಕಟ್ಟೆಯು ಇಂದಿಗೂ ಚಿಪ್ಪಗಿರಿಯಲ್ಲಿದೆ. ಸುಮಾರು ಎಪ್ಪತ್ತು ವರ್ಷಗಳ ಕಾಲ ಬಾಳಿದ ಶ್ರೀ ವಿಜಯದಾಸರು ಹರಿದಾಸಪ್ರಪಂಚದಲ್ಲಿ ಅತ್ಯಂತ ಉಚ್ಚ ಶ್ರೇಣಿಗೆ ಸೇರಿದ್ದಾರೆ.

ವಿಜಯದಾಸರ ಶಿಷ್ಯರೂ ಹಾಗೂ ನಂತರದಲ್ಲಿ ಬಂದ ಅನೇಕ ಹರಿದಾಸರೂ, ವಿದ್ವಾಂಸರೂ ಮುಕ್ತಕಂಠದಿಂದ ಅವರನ್ನು ಹೊಗಳಿದ್ದಾರೆ. ವಿಜಯದಾಸರ ತಮ್ಮಂದಿರಾದ ಆನಂದದಾಸರು "ದಾಸರೆಂದರೆ ಇವರೆ ಹರಿದಾಸರು" ಎಂದಿದ್ದಾರೆ. ಇನ್ನೊಬ್ಬ ಪ್ರಮುಖ ಹರಿದಾಸರಾದ ಗೋಪಾಲದಾಸರು "ವಿಜಯರ ನೆನೆದು ದಿಗ್ವಿಜಯ ಮಾಡಿರೊ" ಎಂದು ಹೇಳಿದ್ದಾರೆ. ಮೋಹನದಾಸರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ– "ಸರಿಗಾಣೆನೆಲ್ಲಿ ಜಗದೊಳು ಕರವ ಮುಗಿಪರಘವ ತೆಗೆವ ಗುರು ವಿಜಯ-ದಾಸರಿಗಿನ್ನು" ಎಂದಿದ್ದಾರೆ. ಜಗನ್ನಾಥದಾಸರು "ರತುನ ದೊರಕಿತಲ್ಲ ಎನಗೊಂದು ರತುನ ದೊರಕಿತಲ್ಲ" ಎನ್ನುತ್ತ ಕುಣಿದಾಡಿದ್ದಾರೆ. ಈ ಹೇಳಿಕೆಗಳೆಲ್ಲ ದಾಸರ ಭವ್ಯವ್ಯಕ್ತಿತ್ವವನ್ನು ಸಾರಿ ಹೇಳುತ್ತವೆ.

**ಸಾಹಿತ್ಯ :**

ಪುರಂದರದಾಸರು ಐದು ಲಕ್ಷ ಪದಗಳನ್ನು ರಚಿಸಲು ಸಂಕಲ್ಪಿಸಿದ್ದ-ರಂತೆ, ಆದರೆ ಅವರೇ ಹೇಳಿದಂತೆ ಪೂರ್ತಿ ಐದು ಲಕ್ಷ ರಚಿಸಲು ಆಗದೆ ನಾಲ್ಕು ಲಕ್ಷ ಇಪ್ಪತ್ತೈದು ಸಾವಿರ ಕೃತಿಗಳನ್ನು ಮಾತ್ರ ರಚಿಸಿದರು. ಅಂದರೆ ಅವರ ಸಂಕಲ್ಪಕ್ಕೆ ಇಪ್ಪತ್ತೈದು ಸಾವಿರ ಪದಗಳು ಕಡಿಮೆಯಾ ದವು. ಅವುಗಳನ್ನು ರಚಿಸಿ ತಮ್ಮ ಸಂಕಲ್ಪವನ್ನು ಪೂರಯಿಸಲು ಪುರಂದರದಾಸರು ತಮ್ಮ ಕೊನೆಯ ಮಗ ಮಧ್ವಪತಿಗೆ ಹೇಳಿದರು. ಆ ಮಾತಿಗೆ ಮಧ್ವಪತಿ "ಅಪ್ಪಾ ಅಂಥ ಘನವಾದ ಕಾರ್ಯ ನನಗೆ ಈ ಜನ್ಮದಲ್ಲಿ ಸಾಧ್ಯವೇ"? ಎಂದರಂತೆ. ಅದಕ್ಕೆ ಪುರಂದರದಾಸರು ಆ ಕಾರ್ಯ ನಿನ್ನಿಂದ ಈ ಜನ್ಮದಲ್ಲಾಗದಿದ್ದರೆ ಮುಂದಿನ ಜನ್ಮದಲ್ಲಾದರೂ

ಪೂರಯಿಸು ಎಂದು ಹೇಳಿದರಂತೆ. ಆದ್ದರಿಂದ ಮಧ್ವಪತಿಯೇ ಮುಂದಿನ ಜನ್ಮದಲ್ಲಿ ವಿಜಯದಾಸರಾಗಿ ಜನಿಸಿ ಆ ಪಿತೃ-ಆಜ್ಞೆಯನ್ನು ಪೂರಯಿಸಿ-ರುವದಾಗಿ ಆಖ್ಯಾಯತೆ ಇದೆ.

ಪುರಂದರದಾಸರ ತರುವಾಯ ದಾಸಪರಂಪರೆಯನ್ನು ಹೊಸ ರೀತಿಯಲ್ಲಿ ಮುಂದುವರಿಸಿದ ಶ್ರೇಯಸ್ಸು ವಿಜಯದಾಸರಿಗೆ ಸಲ್ಲುತ್ತದೆ. ಪುರಂದರದಾಸರ ನಾಲ್ಕನೆಯ ಮಗನಾದ ಮಧ್ವಪತಿಯೇ ಮತ್ತೆ ಹುಟ್ಟಿ ಬಂದು ತಮ್ಮ ತಂದೆ ಪೂರೈಸದೇ ಬಿಟ್ಟಿದ್ದ ೨೫೦೦೦ ಕೀರ್ತನೆಗಳನ್ನು 'ವಿಜಯವಿಠಲ' ಎಂಬ ಅಂಕಿತದಿಂದ ಪೂರ್ಣಗೊಳಿಸಿದನೆಂಬ ಹೇಳಿಕೆಯೂ ಉಂಟು. ಪುರಂದರದಾಸರ ತರುವಾಯ ಹೆಚ್ಚು ಸುಳಾದಿಗಳನ್ನು ಬರೆದವರೆಂದರೆ ವಿಜಯದಾಸರೇ. ವಿಜಯದಾಸರ ಕೀರ್ತನೆಗಳಲ್ಲಿ ಭಕ್ತಿರಸವು ಸೋನೆಯಾಗಿ ಹರಿದಿದೆ. ಅವರ ಕೀರ್ತನೆಗಳು ಸುಲಭವಾಗಿವೆ ಹಾಗೂ ಸುಂದರವಾಗಿವೆ. ವೇದ ಉಪನಿಷತ್ತು ಮತ್ತು ಪುರಾಣಗಳಲ್ಲಿ ಅಡಕವಾಗಿದ್ದ ಗೂಢವಾದ ತತ್ತ್ವಗಳನ್ನು ಹಗುರಾಗಿಸಿ ಈ ಕೀರ್ತನೆಗಳಲ್ಲೆಲ್ಲ ವಿಜಯದಾಸರು ಹರಿಬಿಟ್ಟಿದ್ದಾರೆ. ಇವರ ಸುಳಾದಿಗಳಂತೂ ತುಂಬಾ ಅರ್ಥಗರ್ಭಿತವಾಗಿವೆ. ಅವರ ಮಾತಿನಲ್ಲಿ ಹುರುಳಿದೆ, ಸ್ವಾರಸ್ಯವಿದೆ. ಭಕ್ತನ ಜ್ಞಾನಪಿಪಾಸೆಯನ್ನು ಹಿಂಗಿಸುವ ಎಲ್ಲ ವಿಷಯಗಳೂ ಅಳವಟ್ಟಿವೆ.

ಜೀವವನ್ನು ಕುರಿತು ಅವರು ಒಂದೆಡೆ ಸ್ವಾರಸ್ಯವಾಗಿ ಹೀಗೆ ಪ್ರಶ್ನಿಸಿದ್ದಾರೆ :

ಯಾಕೆ ಬಂದಿ ಜೀವ ಯಾಕೆ ಬಂದಿ ?
ಲೋಕದ ಅನುಭವ ಬೇಕಾಯಿತೇ ನಿನಗೆ ?

ಇಲ್ಲಿ ಜೀವವನ್ನು ಪ್ರಶ್ನಿಸುವ ರೀತಿ ಅರ್ಥಗರ್ಭಿತವಾಗಿದೆ. 'ಲೋಕದ ಸಿಹಿ-ಕಹಿ ಅನುಭವಗಳನ್ನು ಸವಿಯಲು ಬಂದೆಯಾ ಜೀವವೇ' ಎಂದಿದ್ದಾರೆ :

ಕರ್ಮವಶವಾದ ಜೀವಕ್ಕೆ ಲೋಕದ ಕ್ಲೇಶ ತಪ್ಪಿದ್ದಲ್ಲ. ಅದನ್ನು ಅನುಭವಿಸಲೇಬೇಕು. ಆದುದರಿಂದಲೇ ವಿಜಯದಾಸರು :

'ಆದದ್ದೆಲ್ಲ ಆಯಿತು ಹೋದ ಮಾತುಗಳ್ಯಾಕೆ ?

ಎಂದಿದ್ದಾರೆ ಮತ್ತು ಶ್ರೀಹರಿಯ ನಾಮಸ್ಮರಣೆ ಮಾತ್ರ ತಪ್ಪದಿರಲಿ ಎಂದೂ ಎಚ್ಚರಿಸಿದ್ದಾರೆ; ಜೀವವಾದರೂ ಸ್ವತಂತ್ರವಾದದ್ದೆ ? ಇಲ್ಲ 'ಪ್ರತಿಯೊಂದು ಜೀವಿಯು ಒಂದಿಲ್ಲೊಂದು ರೀತಿಯಲ್ಲಿ ಪಾರತಂತ್ರ್ಯದ ಬಲೆಯಲ್ಲಿ ಸಿಲುಕಿಯೇ ಇರುತ್ತಾನೆ. ಇದನ್ನರುಹುವದಕ್ಕೆಂದೆ ವಿಜಯದಾಸರು—

ಹರಿಯೆ ನಿನ್ನಾಧೀನ ಸಕಲ ಜ್ಞಾನೇಂದ್ರಿಯಗಳು
ಹರಿಯೆ ನಿನ್ನಾಧೀನ ಕರ್ಮೇಂದ್ರಿಯಗಳು
ಹರಿಯೆ ನಿನ್ನಾಧೀನ ಪಂಚಭೂತಾತ್ಮಗಳು

ಎಂದು ಜೀವನ ಪಾರತಂತ್ರ್ಯವನ್ನು ಕುರಿತು ಬೆಸಸಿದ್ದಾರೆ.

ಈ ಬ್ರಹ್ಮಾಂಡವು ಆ ಭಗವಂತನ ಕ್ರೀಡಾರಂಗ, ನಾವೆಲ್ಲ ಆತನ ಕೈಗೊಂಬೆಗಳು. ಆತನು ಆಡಿಸಿದಂತೆ ಆಡುವುದೆ ನಮ್ಮೆಲ್ಲರ ಧರ್ಮ; ಇದನ್ನೇ ವಿಜಯದಾಸರು—

ಕುಣಿಸಿದರೆ ಕುಣಿವೆ ನಗಿಸಿದರೆ ನಗುವೆ
ಮಣಿಸಿದರೆ ಮಣಿವೆ ಅಳಿಸಿದರೆ ಅಳುವೆ

ಎಂದು ಹಾಡಿದ್ದಾರೆ.

ಭಕ್ತನಾದವನಿಗೆ ಏಕದೇವೋಪಾಸನೆಯು ಎಷ್ಟು ಶ್ರೇಷ್ಠವಾದದ್ದೋ ಸ್ವಮತನಿಷ್ಠೆಯೂ ಅಷ್ಟೇ ಅನಿವಾರ್ಯವಾದದ್ದು. ವಿಜಯದಾಸರ ಏಕದೇವೋಪಾಸನಾ ಗುಣವು ಶ್ಲಾಘನೀಯವಾದದ್ದು. ಶ್ರೀಹರಿಯನ್ನುಳಿದು ಅನ್ಯದೇವತೆಗಳನ್ನು ನೆನೆಯದಿರಿ ಎಂದು ಅವರೇ ವಿನಂತಿಸಿಕೊಂಡಿದ್ದಾರೆ, ಏಕದೇವನಿಷ್ಠೆಯಂತೆ ವಿಜಯದಾಸರ ಸ್ವಮತಾಭಿಮಾನವೂ ಅಷ್ಟಿಷ್ಟಲ್ಲ ಆದುದರಿಂದಲೇ ಅವರು,

" ಮಧ್ವಮತವ ಪೊಂದದವನ ಭಕುತಿಯಾತಕೆ
ಊರ್ಧ್ವಪುಂಡ್ರ ತಿದ್ದದವನ ಕರ್ಮವ್ಯಾತಕೆ

ಎಂದು ನಿರ್ಭಯವಾಗಿ ಖಂಡಿಸಿದ್ದಾರೆ

ಟೀಕಾಚಾರ್ಯರೆಂದು ಪ್ರಸಿದ್ಧರಾದ ಶ್ರೀ ಜಯತೀರ್ಥರನ್ನು ಸ್ಮರಿಸಿ "ಸಾರಿ ಭಜಿಸಿರೋ ಟೀಕಾಚಾರ್ಯರಂಘ್ರಿಯಾ" ಎಂದು ಹಾಡಿದಂತೆ ಪ್ರೇರಕಶಕ್ತಿಯಾದ ಗುರು ಪುರಂದರದಾಸರನ್ನು ಕುರಿತು:

'ಗುರು ಪುರಂದರದಾಸರೇ ನಿಮ್ಮ ಚರಣಕಮಲವ ನಂಬಿದೆ :
ಎಂದು ಹಾಡಿದ್ದಾರೆ.

ಹರಿದಾಸರು ಹೇಗಿರಬೇಕು ಎಂಬುದನ್ನು ವಿಜಯದಾಸರು ತಮ್ಮ "ಹರಿದಾಸ-ಸುಳಾದಿಯಲ್ಲಿ" ಸ್ಪಷ್ಟವಾಗಿ ಹೇಳಿದ್ದಾರೆ. ಹರಿದಾಸರು, ಗರುವ, ಕೋಪ, ಮದ, ಮತ್ಸರ ಬಿಡಬೇಕು, ಮಧ್ವಮತವೇ ಶ್ರೇಷ್ಠ ವೆಂದು ತಿಳಿಯಬೇಕು, ನಾಮ ಮುದ್ರೆಗಳನ್ನು ಧರಿಸಬೇಕು. ದೇವರಲ್ಲಿ ಪೂಜ್ಯಭಾವನೆಯಿರಬೇಕು. ಗುರು-ಹಿರಿಯರಿಗೆ ಮನ್ನಣೆ ಕೊಡಬೇಕು. ಹರಿಯೇ ಪರದೇವತೆ ಎಂದು ಗಣಿಸಬೇಕು. ಪರಧನ, ಪರಸತಿ, ಪರತ್ಯಾಜ ನಿಂದೆಗಳು ಹರಿದಿವಸ, ಹರಿಚರಿತೆ, ಹರಿಸ್ಮರಣೆ, ಹರಿಪೂಜೆಗಳಿಂದ ಮನಸ್ಸನ್ನು ಶುದ್ಧ ಮಾಡಿಕೊಂಡಿರಬೇಕು. ನರರು ಬೈದರೆ ಆದರವೆಂದು ತಿಳಿಯಬೇಕು. ಬಡತನ ಬಂದರೆ ಹಿಗ್ಗುತಲಿರಬೇಕು. ಒಡಲಿಗೆ ಚಿಂತೆ ಮಾಡಬಾರದು. ಈ ಪ್ರಕಾರ ಇದ್ದ ಹರಿದಾಸರಿಗೆ ಅನಂತ ಜನ್ಮಕ್ಕೂ ತಾಪತ್ರಯಗಳಿಲ್ಲವೆಂದು ವಿಜಯದಾಸರು ಹೇಳಿದ್ದಾರೆ.

ದೇವರು ಸರ್ವವ್ಯಾಪಿ. ಆತನಿಲ್ಲದ ಎಡೆಗಳೇ ಇಲ್ಲ. ಸಕಲ ಕಾರ್ಯ ಗಳೆಲ್ಲವೂ ದೇವರ ಪ್ರೇರಣೆ ಎನ್ನಬೇಕು. ಜೀವನದಲ್ಲಿ ಎದುರಾದ ಸುಖ-ದುಃಖಗಳನ್ನೆಲ್ಲ ಹರಿಗೆ ಸಮರ್ಪಿಸಬೇಕು. ಇದನ್ನೇ ವಿಜಯದಾಸರು :

ನಿನ್ನ ಚಿತ್ತಕೆ ಬಂದುದನು ಮಾಡು ಸರ್ವೇಶ ।
ಎನ್ನ ಸ್ವಾತಂತ್ರ್ಯಲವ ಉಂಟೆ ಸ್ವಾಮಿ ॥

ಎಂದು ಶ್ರೀಹರಿಗೆ ಈ ಶರೀರವನ್ನೆಲ್ಲ ಸಮರ್ಪಿಸಿದ್ದಾರೆ "ನಾಹಂ ಕರ್ತಾ ಸರ್ವಂ ಹರಿ: ಕರ್ತಾ" ಎಂಬ ಸುಪ್ರಸಿದ್ಧ ತತ್ತ್ವವೇ ಇಲ್ಲಿ ವಿಸ್ತಾರವಾಗಿ ನಿರೂಪಿತವಾಗಿದೆ. ಮಾನಾಪಮಾನಗಳೆರಡಕ್ಕೂ ಭಗವಂತನೇ ಹೊಣೆ.

ಯೆಂದು ಎಣಿಸಿ, 'ನಿನ್ನ ಚಿತ್ತಕೆ ಬಂದುದನು ಮಾಡು ಸರ್ವೇಶ' ಎಂದು ಶ್ರೀಹರಿಯಲ್ಲಿ ಕೇಳಿಕೊಂಡಿದ್ದಾರೆ.

ಸಕಲ ಚರಾಚರಗಳಲ್ಲಿಯೂ ವ್ಯಾಪಿಸಿಕೊಂಡು ವಿಶಿಷ್ಟ ಕ್ರಿಯೆಗಳನ್ನು ನಡೆಸುತ್ತಿರುವ ಶ್ರೀಹರಿಯ ಮಹಿಮೆಯನ್ನು ದಾಸರು ವಿಧ-ವಿಧವಾಗಿ ವರ್ಣಿಸಿದ್ದಾರೆ.

> ತನಗೆ ತಾನೇ ಕುಣಿದು ಜೀವಿಗಳ ಕುಣಿಸುವ |
> ಸರ್ವವ್ಯಾಪ್ತ ಜನನ-ಮರಣರಹಿತ ವಿಜಯವಿಠ್ಠಲ ||

ಇಲ್ಲಿ ಸೃಷ್ಟಿನಿಯಾಮಕನ ಲೀಲೆ ಸುಂದರವಾಗಿ ಮೂಡಿಬಂದಿದೆ. ಶ್ರೀ ಹರಿಯ ವಿವಿಧ ಅವತಾರಗಳನ್ನು ಅನೇಕ ಕೀರ್ತನೆಗಳಲ್ಲಿ ವರ್ಣಿಸಿದ್ದಾರೆ. 'ಹರಿಮೂರ್ತಿ ವಿರಹಿತ ಅನ್ಯದೇವರ ನೋಡೆ ಹರುಷವಾಗದು ಕಾಣೋ ಕಣ್ಮನಕೆ' ಎಂದು ದೃಢಭಕ್ತಿಯನ್ನು ಸಾರಿದ್ದಾರೆ. ಶ್ರೀಹರಿಯ ಸರ್ವೋತ್ತಮ ಗುಣವನ್ನು ಎಷ್ಟು ರೀತಿಯಲ್ಲಿ ಹೊಗಳಿದರೂ, ಯಾವ ರೂಪದಿಂದ ಹೊಗಳಿದರೂ ದಾಸರ ವಾಣಿಗೆ ದಣಿವೆಂಬುದೇ ಇಲ್ಲ.

> ಹರಿಯೇ ಸರ್ವೋತ್ತಮ ಹರಿ ಪರದೇವತೆ
> ಹರಿ ಗುಣಪರಿಪೂರ್ಣಂತರ ಬಾಹಿರ ವ್ಯಾಪ್ತಾ
> ಹರಿಪರತತ್ವ ಸಿರಿಯರಸ ಪರಮೇಷ್ಠಿ ಜನಕ

ಹೀಗೆ ಜಿತೇಂದ್ರಿಯನಾದ, ಸಕಲ ದೇವತೆಗಳಿಗೆಲ್ಲ ಒಡೆಯನಾದ ಶ್ರೀಹರಿಯನ್ನು ಕೊಂಡಾಡಿದ್ದಾರೆ.

ಮನಸ್ಸಿನ ಚಂಚಲ ಸ್ವರೂಪವನ್ನು ವಿಜಯದಾಸರು ಅನೇಕ ಕೀರ್ತನೆಗಳಲ್ಲಿ ಚಿತ್ರಿಸಿದ್ದಾರೆ. ಈ ಚಂಚಲತೆಯೊಡನೆ ಅಹಂಕಾರವು ಬೆರೆತರಂತೂ ಕಪಿಗೆ ಸುರಾಪಾನವಾದಂತೆ. ಇದನ್ನೇ ಶ್ರೀ ವಿಜಯದಾಸರು:

> " ನಾನೆ ಪೋಗುತಲಿಪ್ಪೆ ನಾನೆ ಬರುತಲಿಪ್ಪೆ
> ನಾನೆ ಕೊಡುತಲಿಪ್ಪೆ ನಾನೆ ಕೊಳ್ಳುತಲಿಪ್ಪೆ
> ನಾನೆ ಧನವಂತನಪ್ಪೆ ನಾನೆ ಶ್ರೇಷ್ಠನಪ್ಪೆ "

ಎಂಬ ಕೀರ್ತನೆಯಲ್ಲಿ ದಿಟವಾಗಿ ಚಿತ್ರಿಸಿದ್ದಾರೆ. ಸಕಲವೆಲ್ಲಕ್ಕೂ ನಾನೇ ಕಾರಣ; ಹೋಗುವವ ನಾನೇ ಬರುವವ ನಾನೇ, ಕೊಡುವವನೂ ನಾನೇ ಕೊಳ್ಳುವವನೂ ನಾನೇ ಎಂಬ ಅಹಂಕಾರವುಳ್ಳ ಮಾನವ ಅವನತಿ ಹೊಂದುವುದು ನಿಶ್ಚಿತವೆಂದಿದ್ದಾರೆ. ಇಷ್ಟೊಂದು ಅಹಂಕಾರದ ಜೀವಿಯೇ ಅತಿ ಕಷ್ಟ ಬಂದಾಗ ನಿಃಸಹಾಯಕನಾಗುವುದೇಕೆ ? ಎಂದು ದಾಸರು ಸ್ವಾರಸ್ಯಕರವಾಗಿ ಪ್ರಶ್ನಿಸಿದ್ದಾರೆ.

ವಿಜಯದಾಸರು ಬಣ್ಣಿಸಿರುವ ಭವಸಾಗರವನ್ನು ನೋಡಿದರೆ ಮನುಷ್ಯಜನ್ಮವು ಪಟ್ಟಿದ್ದ, ಪಡಬೇಕಾದ, ಪಡಲಿರುವ ದುಃಖ-ಯಾತನೆಗಳ ಅರಿವು ಆಗದೇ ಇರದು. ಇದ್ದ ಮೂರು ದಿನದ ಬದುಕನ್ನೇ ಸಾರ್ಥಕಪಡಿಸಿ-ಕೊಳ್ಳಬೇಕು ಎಂಬ ತಿಳಿವಳಿಕೆ, ಅರಿವು ಮೂಡದೇ ಇರದು: ಆ ಚಿತ್ರಣ ಹೀಗಿದೆ—

ಏಳು ಸಾಗರಕಧಿಕ ಭವಸಾಗರೆಂಬೋದು
ಆಳದಗಳು ನೋಡೆ ಪರಿಮಿತಿ ತೋರದು
ಕೇಳುವದಲ್ಲದೆ ಕಣ್ಣಿಗೆ ಕಾಣಿಸದು
ಬೀಳುವುದಕ್ಕೆ ರೆಂಚಿತು ತಡವಾಗದು
ಏಳುವುದಕೆ ಬಹಳ ದಿವಸ ಬೇಕು.

ಏಳು ಸಮುದ್ರಕ್ಕಿಂತಲೂ ಭವಸಾಗರವು ಅಪಾರವಾದದ್ದು; ಆದಿ ಅಂತ್ಯಗಳಿಲ್ಲದ್ದು. ನೆಲೆ-ಬೆಲೆಗಳು ಇದಕ್ಕಿಲ್ಲ. ಇಂಥ ಅಗಮ್ಯವಾದ, ಅಪಾರವಾದ ಸಾಗರವನ್ನು ಹರಿಗೋಲಿನಲ್ಲಿ ದಾಟುವುದಸಾಧ್ಯ. ಇಂಥ ಭವಸಾಗರವನ್ನು ದಾಟಬೇಕಾದರೆ ನಾವು ಶ್ರೀಹರಿಯನ್ನೇ ಮೊರೆ ಹೋಗ ಹೋಗಬೇಕು. ಆತನ ಅನುಗ್ರಹವೇ ನಮಗೆ ದಾರಿದೀಪವಾಗಬಲ್ಲದು. ಹೀಗೆ ವಿಜಯದಾಸರು ಭವದುಃಖವನ್ನು ತಮ್ಮ ಕೀರ್ತನೆಗಳಲ್ಲೆಲ್ಲ ಚಿತ್ರಿ-ಸಿರುವದು ಮಾತ್ರವಲ್ಲದೇ ಆ ಭವದ ಕೋಟಲೆಗಳಿಂದ ಹೇಗೆ ಪಾರಾಗ-ಬೇಕೆಂಬುದನ್ನೂ ತೋರಿಸಿಕೊಟ್ಟಿದ್ದಾರೆ. ಹೀಗಾಗಿ ವಿಜಯದಾಸರ ಕೀರ್ತನೆಗಳು ಸರ್ವದಾ ಮಾನ್ಯವೆನಿಸಿಕೊಳ್ಳುತ್ತವೆ.

ತಪ್ಪು ಮಾಡುವುದು ಮಾನವಸಹಜ ಸ್ವಭಾವ. ಈ ತಪ್ಪುಗಳು ಅರಿತೋ ಅರಿಯದೆಯೋ ಘಟಿಸುತ್ತವೆ. ಆದರೆ ಒಮ್ಮೆ ಮಾಡಿದ ತಪ್ಪು ಮತ್ತೊಮ್ಮೆ ಮಾಡದಂತೆ ಎಚ್ಚರದಿಂದಿರುವವನೇ ನಿಜವಾದ ಮಾನವ. ಇದನ್ನೇ ವಿಜಯದಾಸರು ತಮ್ಮ ಕೀರ್ತನೆಯಲ್ಲಿ ಹೀಗೆ ಹೇಳಿದ್ದಾರೆ:

ನಿಚ್ಚಳಾಗಲಿಬೇಕು ತಿಳಿದು ತಾನು |
ನಿಚ್ಚ ಮಾಡುವ ದೋಷರಾಶಿಗಳಳಿದು ||

ಇಲ್ಲಿ ನಿಚ್ಚಳಾಗಿರಬೇಕು ಎಂದರೆ ಬಹು ಎಚ್ಚರದಿಂದ ಇರಬೇಕು ಎಂದರ್ಥ.

ಅಹಂಕಾರ, ಚಂಚಲತೆಗಳನ್ನು ಹೋಗಲಾಡಿಸಿದಂತೆ ಮಮತೆ, ಮಮಕಾರಗಳನ್ನು ಹೋಗಲಾಡಿಸಿಕೊಂಡು ಚಿತ್ತಶುದ್ಧಿಯಾದರೆ ಮುಕ್ತಿ ಸಾಧನೆಯಾದರೂ ಆಗಬಹುದು ಎಂದು ವಿಜಯದಾಸರು ಈ ಕೀರ್ತನೆಯಲ್ಲಿ ಹೇಳಿದ್ದಾರೆ.



ಶ್ರೀ ದಾಸಗುರುಭ್ಯೋ ನಮಃ

# ಕೆಲವು ಮಹತ್ವದ ದಾಸರ ವಿವರ

| ಅ. ಸಂ. | ದಾಸರ ಹೆಸರು | ಕಾಲ ( ಕ್ರಿ. ಶ. ) | ಅಂಕಿತ | ಕೃತಿಗಳು |
|---|---|---|---|---|
| ೧. | ನರಹರಿತೀರ್ಥ | ಕ್ರಿ. ಶ. ೧೨೭೫ | ರಘುಕುಲತಿಲಕ ಅಥವಾ ಶ್ರೀ ರಘುಪತಿ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೨. | ಶ್ರೀಪಾದರಾಯ | ಕ್ರಿ. ಶ. ೧೪೨೨-೧೪೮೦ | ರಂಗವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೩. | ವ್ಯಾಸರಾಯ | ಕ್ರಿ. ಶ. ೧೪೪೭-೧೫೩೯ | ಶ್ರೀಕೃಷ್ಣ ಅಥವಾ ಕೃಷ್ಣ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೪. | ವಾದಿರಾಜ | ಕ್ರಿ. ಶ. ೧೪೮೦-೧೬೦೦ | ಹಯವದನ | ಕೀರ್ತನೆ, ವೈಕುಂಠ ವರ್ಣನೆ; ಸ್ವಪ್ನ-ಗದ್ಯ,ಲಕ್ಷ್ಮೀ ಶೋಭಾನೆ,ಗುಂಡಕ್ರಿಯಾ-ಇತ್ಯಾದಿ ಕಾವ್ಯಕೃತಿಗಳು. |
| ೫. | ಪುರಂದರದಾಸ | ಕ್ರಿ. ಶ. ೧೪೮೪-೧೫೬೪ | ಪುರಂದರವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೬. | ಕನಕದಾಸ | ಕ್ರಿ. ಶ. ೧೫೦೯-೧೬೦೭ (?) | ಕಾಗಿನೆಲೆಯಾದಿಕೇಶವ ಅಥವಾ ಬಾಡದಾದಿಕೇಶವ | ಕೀರ್ತನೆ ಹಾಗೂ ಮೋಹನತರಂಗಿಣಿ ರಾಮಧಾನ್ಯ ಚರಿತ್ರೆ, ನಳಚರಿತ್ರೆ, ಹರಿ-ಭಕ್ತಿಸಾರ ಎಂಬ ಕಾವ್ಯ ಕೃತಿಗಳು. |
| ೭. | ಮಹಿಪತಿದಾಸ | ಕ್ರಿ. ಶ. ೧೬೧೧-೧೬೮೧ | ತರಳ/ಬಾಲ/ಚಿಣ್ಣ ಮಹಿಪತಿ | ಕೀರ್ತನೆ, ಕೋಲಾಟಪದ, ಸುವ್ವಿಪದ, ಶೋಭಾನೆಪದ, ಜೋಗುಳ ಪದ, ಕೊರವಂಜಿ ಪದ—ಇತ್ಯಾದಿ ಪದಗಳು |
| ೮. | ವಿಜಯದಾಸ | ಕ್ರಿ. ಶ. ೧೬೮೨-೧೭೫೫ | ವಿಜಯವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೯. | ಪ್ರಸನ್ನವೆಂಕಟದಾಸ | ಕ್ರಿ. ಶ. ೧೬೮೦-೧೭೫೨ | ಶ್ರೀನಿವಾಸ ಅಥವಾ ಪ್ರಸನ್ನವೆಂಕಟ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೧೦. | ಗೋಪಾಲದಾಸ | ಕ್ರಿ. ಶ. ೧೭೨೧-೧೭೬೨ | ಗೋಪಾಲವಿಠಲ | ಕೀರ್ತನೆ, ಸುಳಾದಿ, ಉಗಾಭೋಗಗಳು. |
| ೧೧. | ಜಗನ್ನಾಥದಾಸ | ಕ್ರಿ. ಶ. ೧೭೨೮-೧೮೦೯ | ಜಗನ್ನಾಥವಿಠಲ | ಕೀರ್ತನೆ, ಹಾಗೂ ಹರಿಕಥಾಮೃತಸಾರ. (ಕಾವ್ಯ), ಸುಳಾದಿ, ಉಗಾಭೋಗಗಳು. |
| ೧೨. | ಹೆಳವನಕಟ್ಟೆ ಗಿರಿಯಮ್ಮ | ಕ್ರಿ. ಶ. ಸು. ೧೭೫೦ | ಹೆಳವನಕಟ್ಟೆಯ ರಂಗ | ಕೀರ್ತನೆ, ಚಂದ್ರಹಾಸ ಕಥೆ, ಸೀತಾ-ಕಲ್ಯಾಣ, ಬ್ರಹ್ಮ ಕೊರವಂಜಿ. |

## ಜಯ-ಜಯ ಮೂಷಕಗಮನಾ

( ಗಣಪತಿ ಸ್ತುತಿ )

**ರಾಗ—ನಾಟಿ ( ಭೈರವಿ )** ಝಂಪೆತಾಳ ( ದೀಪಚಂದಿ )

ಜಯಜಯ ಮೂಷಕಗಮನಾ |
ಜಯಜಯ ಗಜಾನನಾ |
ಜಯಜಯ ನಾಗಾಭರಣಾ |
ಜಯ ಏಕದಂತ ಜಯಜಯ || ಪ ||

ಮತಿಯ ಕೊಡು ಪಾರ್ವತಿಯ ನಿಜ ತನುಜನೆ |
ಬಿಡದೆ ನಿನ್ನನು ನಾನು ನುತಿಸುವೆ ಕ್ಷಿತಿಯೊಳಗೆ ||
ಶ್ರೀ ಲಕುಮಿಪತಿಯ ಕೊಂಡಾಡಿ ಸದ್ಗತಿಯ |
ಪಡೆಯುವದಕ್ಕೆ ಸಾರಥಿಯಾಗು ದೇವಾ || ೧ ||

ಆಕಾಶದಭಿಮಾನಿ ಅಂಗಜನ ಚಾಪ |
ನಿರಾಕರಿಸಿ ಬಿಸುಟ ಲಂಬೋದರನೆ ||
ಏಕ ಪಿಂಗಾದಿಗಳ ಪಿರಿಯ ಹಸ್ತ ಚತುಷ್ಟ |
ಲೋಕದೊಳು ಭಜಿಸುವರ ವಿದ್ಯಾದಾನಿಧಿಯೆ || ೨ ||

ಸೀತಾರಮಣನಿಂದ ಪೂಜಿತನಾಗಿ |
ವನಧಿ ತೀರದಲ್ಲಿ ಮೆರೆವ ಗಣೇಶಾ ||
ಸೇತುಮಾಧವ ವಿಜಯ ವಿಠ್ಠಲರೇಯನ |
ದೂತನು ನೀನೆ ಪಾಶಾಂಕುಶಧರನೆ || ೩ ||

## ಈಶಾ ಕೈಲಾಸವಾಸಾ

### ( ಕಾಶೀ ವಿಶ್ವೇಶ್ವರ ಸ್ತುತಿ )

ರಾಗ—ಮೋಹನ ಕಲ್ಯಾಣಿ ( ಮಾಲಕಂಸ )　　　ತ್ರಿವಿಡಿತಾಳ ( ಝಪ್ )

ಈಶಾ ಕೈಲಾಸವಾಸಾ | ಕಾಶೀ ನಗರಾಧೀಶಾ |
ಶೇಷಭೂಷಣಾ ! ಗಿರೀಶಾ | ವಿಶ್ವೇಶ ಚಿತ್ತವಾಸಾ || ಪ ||

ಶಿವಸಿದ್ಧ ಸಾಧ್ಯ ಸೇವ್ಯಾ | ಭವವನಾ ಶವದಿವ್ಯ !
ಭವಮೂರ್ತಿ ಕೀರ್ತಿಭವ್ಯಾ | ಕವಿಪ್ರಿಯ ಜ್ಞಾನ ದ್ರವ್ಯಾ ಹಾ |
ಶಿವ ಓಂ ನಮಃ ಶಿವ | ತವಚರಣ ನೋಡುವ |
ಪವಿತ್ರ ಚಿತ್ತವ ಕೊಡು | ಧವಳಗಂಗಾಧರನೇ || ೧ ||

ಸತಿನಾಥ ಭೂತಪ್ರೀತ | ಸತತ ಸದ್ಗುಣವ್ರಾತ
ಪತಿತಪಾವನ ತಾತ | ಕೃತುವೈ ಪದ್ಮಜಾತ ಹಾ ||
ಕ್ಷಿತಿಯೊಳು ನೀಲಲೋಹಿತ | ನೀನೇ ಗುರುವೆಂದು |
ತುತಿಪ ಗತಿಗೆ ರಘು | ಪತಿನಾಮ ಎನಗೀಯೋ || ೨ ||

ತ್ರಯನೇತ್ರ ಚಿತ್ರಗಾತ್ರ | ನಯ ನಮಿಪರ ಮಿತ್ರ ಜಯ |
ಜಯಾಮರ ಸ್ತೋತ್ರ | ದಯಮಾಡೊ ಪುಣ್ಯಪಾತ್ರಾ ಹಾ ||
ಭಯನಿವಾರಣ ಸಿರಿ | ವಿಜಯವಿಠ್ಠಲನ |
ಭಕುತಿಯು ಕೊಡು ಅತಿ | ಶಯದಿ ಪಿನಾಕೀಶಾ || ೩ ||

## ಶಂಕರ ನಾರಾಯಣ ಸಲಹೊ ಎನ್ನ

### ( ಹರಿ-ಹರ ಸ್ತೋತ್ರ )

ರಾಗ—ಮುಖಾರಿ ( ಕಾಫಿ )　　　ಆದಿತಾಳ ( ತೀನ್ ತಾಳ )

ಶಂಕರ ನಾರಾಯಣ ಸಲಹೊ ಎನ್ನ |
ಪಂಕಜ ಪಾರ್ವತಿ ಪ್ರಿಯಾ | ಕಿಂಕರನ ಮೊರೆ ಕೇಳು || ಪ ||

ಶಂಖಚಕ್ರಪಾಣಿ | ಮೃಗಾಂಕ ಮೌಳಿ ಅಹಿಪರಿ- |
ಯಂಕ ರುಂಡಮಾಲಾ ಶ್ರೀ | ವತ್ಸಾಂಕ
ಭುಜಗಭೂಷಣ ವಿಷ್ಣು || ೧ ||

ನಂದಿಗಮನ ಗರುಡಾರೂಢಾ | ಅಂಧಭಸ್ಮಧರ ಕಸ್ತೂರಿ
ಗಂಧಲೇಪ ಭೂತನಾಥಾ | ಸಿಂಧುಶಯನ ತ್ರಿಪುರ ವೈರಿ || ೨ ||

ಪೀತಾಂಬರಧರ ಕೃತ್ತಿವಾಸಾ | ಜಾತರಹಿತ ಜಾಹ್ನವಿಧರ | ವಿ-
ಧಾತ ಜನಕ ತ್ರಿಶೂಲಪಾಣಿ | ವಾತನೊಡೆಯ
ಶಿವ ಗೋವಿಂದ || ೩ ||

ಕೈಲಾಸವಾಸ ವೈಕುಂಠ | ಲೋಲ ಮಹಾಲಿಂಗ ರಂಗಾ |
ಜ್ವಾಲನೇತ್ರ ಕಮಲನಯನಾ | ಕಾಲಾ ನೀಲವರ್ಣ
ಕಪರ್ದಿ || ೪ ||

ರಾಜನೊಬ್ಬ ಭೃತ್ಯನೊಬ್ಬ | ಪೂಜ್ಯನೊಬ್ಬ ಮಾಳ್ಪನೊಬ್ಬ |
ಮೂಜ್ಜಗೇಶ ವಿಜಯ ವಿಠಲ | ರಾಜ ತಾತ
ಈಶ ನೊಮ್ಮಗ || ೫ ||

## ಪಂಪಾಪುರಾಧೀಶ ಶ್ರೀವಿರೂಪಾಕ್ಷ

ರಾಗ—ಸಾವೇರಿ ( ಭೂಪ ) ತ್ರಿಪುಟತಾಳ ( ದೀಪಚಂದಿ )

ಪಂಪಾಪುರಾಧೀಶ ಶ್ರೀವಿರೂಪಾಕ್ಷ ನೀ
ಪಾಲಿಪುದೆಮ್ಮನು || ಪ. ||

ಕಾಪಾಡುವದು ಶ್ವೇತದೀಪಾವಾಸನ ತೋರಿ |
ಸರ್ಪಭೂಷಣದೇವ ತ್ರಿಪುರ ಸಂಹಾರ ||

ಭಾಷುರೆ ಸುರಕುಲದೀಪ ಸದಾಶಿವ |
ಶ್ರೀಪತಿಪಾದ ಸಮೀಪದ ಸೇವಕ || ಅ. ಪ. ||

ಹರಿಪಾದೋದಕ ಶಿರದಲಿ ಧರಿಸಿಹೆ |
ಹರಿಕಥಾಮೃತ ಮಳೆಗರೆವೆ ನೀ ||
ಕರುಣಿ ಸಂಕರುಷಣನ ಚರಣಾಬ್ಜ ಧೂಳಿ ಶ- |
ರೀರ ಲೇಪನದಿಂದ ವರತೇಜಯುತನೆ ||
ಮುರಹರಗೆರಗದ ನರನಿಗೆ ನರಕವು |
ಸ್ಥಿರವೆಂದು ಸುರವರ ಭೇರಿ ಭೋರಿಡುತಿರೆ ||
ನಿರುತ ಅವನ ಪದ ಮರೆಯದೆ ಮನಗೊಂಡೆ |
ಶರಣು ಅಮರನುತ ಗುರುಶಿರೋಮಣಿಯೆ || ೧ ||

ದೇಶಕ್ಕೆ ದಕ್ಷಿಣ ಕಾಶಿಯೆನಿಸುವ ವಿ- |
ಶೇಷ ಸ್ಥಳದೊಳು ವಾಸವಾಗಿ ಅ- ||
ಶೇಷ ಜನರನ್ನು ಲೇಸಾಗಿ ಸಲಹುವಿ |
ವಾಸವಾದಿ ಅನಿಮೇಷವಂದಿತನೆ ||
ದೋಷನಾಶನ ಸಂತೋಷದಿ ಗಿರಿಜೆಗೆ |
ಶ್ರೀಶನ ಮಂತ್ರೋಪದೇಶವ ಮಾಡಿದೆ ||
ದಾಶರಥಿಯ ನಿಜದಾಸರೆನಿಸುವರ |
ಪೋಷಿಪೆ ಶಿವಪರಮೇಶ ಕೃಪಾಳೊ || ೨ ||

ಕಂದುಗೊರಳ ಜೀಯ ಸಿಂಧೂರ ವೊಗನಯ್ಯ |
ಕಂದರ್ಪಹರ ಭಕ್ತಬಾಂಧವ ಕಾಯೊ ||
ಇಂದಿರೆರಮಣ ಗೋವಿಂದನ ಪಾದಾರ- |
ವಿಂದಭೃಂಗನೆ ಭವದಿಂದ ಕಡೆಗೆ ಮಾಡೊ ||
ನಂದಿವಾಹನ ಎನ್ನ ಹಿಂದಣ ಕಲುಷಿತ |
ವೃಂದಗಳೋಡಿಸು ಇಂದುಧರ ಅರ- ||

ವಿಂದನಯನ ಸಿರಿವಿಜಯ ವಿಠ್ಠಲನ |
ಕುಂದದೆ ಭಜಿಪ ಆನಂದವ ಕರುಣಿಸು || ೩ ||

## ಶಿವನ ನೋಡಿರೊ

( ರುದ್ರದೇವ ಸ್ತುತಿ )

ರಾಗ—ವರಾಳಿ ( ಭೈರವಿ ) ಅಟತಾಳ ( ದಾದರಾ )

ಶಿವನ ನೋಡಿರೊ ಇಂದು ಸ್ತವನ ಮಾಡಿರೊ |
ತವಕದಿಂದ ತಿಳಿದು ಅವಗುಣಂಗಳ ತೊರೆದು ನಿತ್ಯ || ಪ. ||

ಅಂತಕಾಪುರ ವೈರಿ | ದಿನಾಂತ ವೃಷಭನೇರಿ |
ಕಾಂತಿಸಹಿತ ಜನರಂಗಣದಿ | ನಿಂತು ಮಾತು | ಲಾಲಿಪ
ಮಹಿಮ || ೧ ||

ಸುರಜನಕೆ ಪ್ರೀತ ಸರ್ವದ | ಅಸುರವೈರಿಯು ನೇಮದಿಂದ |
ವಸುಧೆಯೊಳಗೆ ಬಲಿದಾನೇಕಾ | ದಶರುದ್ರರೊಳು ಬಲು
ಗುಣವಂತ ||೨||

ದಕ್ಷ ಪ್ರಜೇಶ್ವರನ ಧ್ವರ | ರಕ್ಷಣೆಮಾಡಿದ ದಕ್ಷ ಮೂರ್ತಿ |
ಮೋಕ್ಷಕೆ ಮನಸು ಕೊಡುವ | ನಿಟಲೇಕ್ಷಣವಂತ ಶಾಂತ || ೩ ||

ಕರಿಚರ್ಮಾಂಬರ ಧಾರಿ ವಾರಿ | ಧರ ತ್ರಿಶೂಲ ಡಮರುಗ ಪಾಣಿ |
ಶರ ಗದ್ದುಗೆ ಸುಮೇರು ವೇದಾ | ತುರಗವಾಗಿರಲಂದು
ಅಂದಡಿ || ೪ ||

ನಮಿಸಿ ಒರಲಿ ಬೇಡಿ ಭವದಿ | ಮಮತೆ ಓಡಿಸಿ ಭಕುತಿಯಿಂದಲಿ |
ರಮೆಯರಸ ವಿಜಯ ವಿಠ್ಠಲನ್ನ | ಶಮೆದಮೆಯಿಂದ
ಪೂಜಿಪ ಧೀರ || ೫ ||

## ಉಮಾಕಾತ್ಯಾಯನೀ ಗೌರಿ ದಾಕ್ಷಾಯಣಿ

( ಪಾರ್ವತಿ ಸ್ತುತಿ )

ರಾಗ—ತೋಡಿ ( ಭೈರವಿ ) ಆದಿತಾಳ ( ಕಹರವಾ )

ಉಮಾಕಾತ್ಯಾಯಸೀ ಗೌರಿ ದಾಕ್ಷಾಯಣಿ |
ಹಿಮವಂತಗಿರಿಯ ಕುಮಾರಿ || ಪ ||

ರಮೆಯರಸನ ಪದಕಮಲ ಮಧುಪೆ ನಿತ್ಯ |
ಅಮರವಂದಿತೆ ಗಜಗಮನೆ ಭವಾನಿ || ಅ. ಪ. ||

ಪನ್ನಗಧರನ ರಾಣಿ ಪರಮಪಾವನಿ |
ಪುಣ್ಯಫಲ ಪ್ರದಾಯಿನಿ ||
ಪನ್ನಗವೇಣಿ ಶರ್ವಾಣಿ ಕೋಕಿಲವಾಣಿ |
ಉನ್ನತ ಗುಣಗಣ ಶ್ರೇಣಿ ||
ಎನ್ನ ಮನದ ಅಭಿಮಾನ ದೇವತೆಯೆ |
ಸ್ವರ್ಣಗಿರಿ ಸಂಪನ್ನೆ ಭಾಗ್ಯನಿಧಿ ||
ನಿನ್ನ ಮಹಿಮೆಯನು ಬಿನ್ನಾಣದಲಿ ನಾ |
ಬಣ್ಣಿಸಲಳವೆ ಪ್ರಸನ್ನವದನಳೆ || ೧ ||

ಮುತ್ತಿನ ಪದಕ ಹಾರ ಮೋಹನ ಸರ |
ಉತ್ತಮಾಂಗದಲಂಕಾರ ||
ಜೊತ್ಯಾಗಿ ಇಟ್ಟ ಪಂಜರದೋಲೆ ವಯ್ಯಾರ |
ರತ್ನಕಂಕಣದುಂಗುರ ||
ತೆತ್ತೀಸ ಕೋಟಿ ದೇವತೆಗಳ್ ಪೊಗಳುತ |
ಸತ್ತಿಗೆ ಚಾಮರವೆತ್ತಿ ಹಿಡಿಯುತಿರೆ ||
ಸುತ್ತಲು ಆಡುವ ನರ್ತನ ಸಂದಣಿ |
ಎತ್ತ ನೋಡಿದರತ್ತ ತಕ್ಥೈ ವಾದ್ಯ || ೨ ||

ಪೊಳೆವ ವಸನ ಕಂಚುಕ ಕಸ್ತೂರಿ ತಿಲಕ |
ಥಳಿಪ ಮೂಗುತಿ ನಾಸಿಕ ||
ತಳಿತ ಮಲ್ಲಿಗೆ ಗಂಧಿಕ ಮುಡಿದ ಸೂಸುಕ |
ಸಲೆ ಭುಜಕೀರ್ತಿ ಪಾಠಿಕ ||
ಇಳೆಯೊಳು ಮಧುರಾಪೊಳಲೊಳು ವಾಸಳೆ |
ಅಳಿಗಿರಿ ವಿಜಯವಿಠ್ಠಲನ ಕೊಂಡಾಡುವ ||
ಸುಲಭ ಜನರಿಗೆಲ್ಲ ಒಲಿದು ಮತಿಯನೀವ |
ಗಿಳಿಕರ ಶೋಭಿತೆ ಪರಮಮಂಗಳೆ ಹೇ || ೩ ||

## ವರಗಳನು ಕೊಡುವದು ವಾಸುಕಿಯ ಪ್ರಿಯಾ

( ಕಾಮದೇವರ ಸ್ತುತಿ )

ರಾಗ—ಕಾಂಬೋದಿ ( ದರ್ಬಾರಿ ಕಾನಡಾ )          ಝಂಪೆತಾಳ ( ಝಪ್ )

ವರಗಳನು ಕೊಡುವದು ವಾಸುಕಿಯ ಪ್ರಿಯಾ |
ಕರುಣದಿಂದಲಿ ಒಲಿದು ಕಂಡನಾತುರದಲಿ || ಪ ||

ಇಂದ್ರಸಮಾನ ದೇವತೆಯೆ ರತಿಪತಿಯೇ |
ಇಂದಿರೇಶನ ನಿಜಕುಮಾರ ಮಾರ ||
ಒಂದು ಕಲ್ಪದಲಿ ಸುಂದರನೆನಿಸಿಕೊಂಡಿರ್ದ |
ಬಂಧುವೇ ಅಹಂಕಾರ ಪ್ರಾಣನಿಂದಧಿಕನೆ || ೧ ||

ವನಜಸಂಭವನು ಸೃಷ್ಟಿ ಸೃಜಿಸಗೋಸುಗ |
ಮನದಲ್ಲಿ ಪುಟ್ಟಿಸೆ ಚತುರ ಜನರ ||
ಮುನಿಗಳೊಳಗೆ ನೀ ಸನತ್ಕುಮಾರನಾಗಿ ಜನಿಸಿ ||
ಯೋಗಮಾರ್ಗದಲ್ಲಿ ಚಲಿಸಿದ ಕಾಮಾ || ೨ ||

ತಾರಕಾಸುರನೆಂಬ ಬಹು ದುರುಳತನದಲ್ಲಿ ।
ಗಾರು ಮಾಡುತಲಿರಲು ಸುರಗಣವನು ॥
ಗೌರಿ ಮಹೇಶ್ವರರಿಗೆ ಪುತ್ರನಾಗಿ ಪುಟ್ಟಿ ।
ಧಾರುಣಿಯೊಳಗೆ ಸ್ಕಂಧನೆನಿಸಿದೆ ॥ ೩ ॥

ರುಕ್ಮಿಣಿಯಲಿ ಜನಿಸಿ ಮತ್ಸ್ಯ ಉದರದಲಿ ।
ಪೊಕ್ಕು ಶಿಶುವಾಗಿ ಸತಿಯಿಂದ ಬೆಳೆದು ॥
ರಕ್ಕಸ ಶಂಬರನೊಡನೆ ಕಾದಿ ಗೆದ್ದು ಮರಳಿ ।
ಚಕ್ಕನೆ ಸಾಂಬನೆನಿಸಿದೆ ಜಾಂಬವತಿಯಲ್ಲಿ ॥ ೪ ॥

ಜನಪ ದಶರಥನಲ್ಲಿ ಭರತನಾಗಿ ಪುಟ್ಟಿದೆ ।
ಮನೋ ಅವೈರಾಗ್ಯ ಚಕ್ರಾಭಿಮಾನೀ ॥
ಎನಗೊಲಿದ ವಿಜಯವಿಠ್ಠಲರೇಯನಂಘ್ರಿ ।
ಅರ್ಚನೆ ಮಾಡುವ ಸುಬ್ರಹ್ಮಣ್ಯ ಬಲು ಧನ್ಯ ॥ ೫ ॥

## ಹರೇ ವಿಠ್ಠಲಾ ಪಾಂಡುರಂಗ

ರಾಗ—ಧನ್ಯಾಸಿ ( ಭೈರವಿ ) ಆದಿತಾಳ ( ದೀಪಚಂದಿ )

ಹರೇ ವಿಠ್ಠಲಾ ಪಾಂಡುರಂಗ ಪರಿಪಾಲಯ ಕಂಸಾರೇ ॥ ಪ ॥

ಕರಕಮಲದ್ವಯ ಕಟಿಯ ಮ್ಯಾಲೆಯಿಟ್ಟ ।
ಪರಮಪುರುಷ ಶೌರೇ ಮುರಾರೇ ॥ ಆ. ಪ. ॥

ಜಲಜಭವಾದಿ ಸುರಸನ್ನುತ ಪಾದ ಜಲಜನಾಭನಾದ ।
ಕಲುಷದೂರ ಕರುಣಾಕರ ರಂಗ ಸುಲಲಿತಮಹಿಮ
ಹರೇ ಮುರಾರೇ ॥ ೧ ॥

ಪುಂಡಲೀಕ ವರದಾತ ಮುಕುಂದ ಕುಂಡಲಿಶಯನ ಹರೇ |
ಅಂಡಜವಾಹನ ಅಪ್ರಾಕೃತಕಾಯ ಕುಂಡಲಧರ
ಹರೇ ಮುರಾರೇ || ೨ ||

ಧಿಟ್ಟತನದಿ ಹರಿಭಕ್ತ ಕೊಟ್ಟ ಇಟ್ಟಿಗಿ ಮೇಲೆ ನಿಂದ ದೇವ |
ಸೃಷ್ಟಿಗೊಡೆಯ ಶ್ರೀವಿಜಯವಿಠ್ಠಲ ದುಷ್ಟಕುಲಾಂತಕನೇ
ಶ್ರೀಕೃಷ್ಣ || ೩ ||

## ಏಳು ಬೆಳಗಾಯಿತು

( ಉದಯರಾಗ )

ರಾಗ—ಉದಯ ( ಭೈರವ ) ತ್ರಿವಿಡಿತಾಳ ( ದೀಪಚಂದಿ )

ಏಳು ಬೆಳಗಾಯಿತು ಯದುಕುಲೋತ್ತಮ |
ವಾಲಗಕೆ ಪರಮೇಷ್ಠಿ ಹರ ಸುರಪಾಲಕರು || ಪ ||

ಹರಸುರ ಪಾಲಕರು ಬಂದರು ತಮ್ಮಯ |
ಆಳುಸಹಿತದಲಿ ರಂಗಾ || ಅ. ಪ ||

ವೇದವನು ತಮ ಕದ್ದು ಒಯ್ದನು |
ಆಧಾರಾಗದೆ ಅದ್ರಿ ಮುಣುಗಿತು ||
ಮೇದಿನಿಯ ಬಳಕೊಂಡು ಹೋದನು |
ಅದಿತಿಯ ಸುತನು ಬಾಧಿಗಾಗದಲೆ ಬಂದು ಸಕಲರು ||
ಆದರಣೆಯಿಂದ ಕೈಯ ಮುಗಿದು ನೀ |
ದಯಾನಿಧಿ ಎಂದು ಹೊರಗೆ ಕಾದು ಐದಾರೆ ರಂಗ || ೧ ||

ಬಲಿಯ ಅಟ್ಟುಳಿ ಹೆಚ್ಚಿತು ವೆಗ್ಗಳಿಸಿದರು |
ಛತ್ರಿಯರು ಈರೈದು ತಲೆಯವನು ||

ಬಲವಂತನಾದನು ಆರಿಗೊಶವಿಲ್ಲ |
ಇಳೆಗೆ ಭಾರವು ತೂಕವಾಯಿತು ಕಳ- ||
ವಳಗೊಳಲಾರೆವೆನುತಲಿ ಅಳುಕಿ ಭಯದಲಿ |
ನಿಮ್ಮ ಬಾಗಿಲ ಬಳಿಯ ಸಾರಿದರೊ ರಂಗಾ || ೨ ||

ಮೂರುಪುರದವರೀಗ ನಮ್ಮನ್ನ ಮೀರಿದರು |
ಕಲಿಪುರುಷ ಸುಜನರ ಮೇರೆದಪ್ಪಿಸಿ ನಡೆಸಿ ||
ಬಲು ವಿಕಾರ ಮಾಡಿದನು ಈ ರೀತಿ ಶ್ರಮವೆಂದು |
ಪೇಳಲು ಮಾರಪಿತ ಸಿರಿ ವಿಜಯ- ||
ವಿಠ್ಠಲ ಕಾರಣಾರ್ಥವ ಕಳೆದು |
ಮುಂದೆ ಉದ್ಧಾರ ಮಾಡಿದನು || ೩ ||

## ಉದ್ಧರಿಸುವುದೆನ್ನ ಉದಧಿಶಯನಾ

ರಾಗ—ಪಾಟಿ ( ಭೂಪ ) ಝಂಪೆತಾಳ ( ಝಪ್ )

ಉದ್ಧರಿಸುವುದೆನ್ನ ಉದಧಿಶಯನಾ || ಪ ||

ಬಿದ್ದೆ ನಿನ್ನಯ ಪಾದಪದ್ಮದ್ವಯಕೆ ಇಂದು || ಅ. ಪ ||

ಅಂದು ನೀ ಪೇಳಿದಂದದಿ ತೀರ್ಥಯಾತ್ರೆ |
ನಿಂದಿರದೆ ಸಂಚರಿಸಿ ಪುಣ್ಯವೆಲ್ಲಾ ತಂದು ||
ನಿನಗರ್ಪಿಸಿದೆ ಕೈಕೊಂಡು ಮುಂದೆ ಎನ- |
ಗೊಂದು ದಾರಿಯ ತೋರು ತಡಮಾಡದಲೆ ದೇವಾ || ೧ ||

ಯಾತರವ ನಾನು ನಿನ್ನರಮನೆ ಗಾಯಕರ |
ಧೂತರೆಂಜಲನುಂಡು ಬೆಳೆದ ನರನೋ ||

ನೋತಫಲವಾವದೊ ನೀನೆ ಬಲ್ಲೆ ಜೀಯಾ |
ಮಾತು-ಮಾತಿಗೆ ಹಿಗ್ಗಿ ನಗುವ ಚೆನ್ನಿಗರಾಯ || ೨ ||

ಇಷ್ಟೆನ್ನ ಮನದಭೀಷ್ಟೆ ಒಂದೆವುಂಟು |
ಕೃಷ್ಣಾಸ್ನಾನ ಕೃಷ್ಣಸಂದರುಶನಾ ||
ಕೊಟ್ಟು ಕೇವಲವಾಗಿ ನಿನ್ನಂಘ್ರಿಯಲಿ ರತಿ |
ಇಟ್ಟು ಭಜಿಸುವಂತೆ ಭಾಗ್ಯವನು ಕೊಡು ದೇವಾ || ೩ ||

ಏನು ಕಡಿಮೆ ನೀನು ಒಲಿದರಾದಡೆ ಕಾಮ |
ಧೇನು ತರುಮಣಿ ಬಾರದೆ ನಿಲ್ಲವೇ ||
ಶ್ರೀನಿವಾಸನೆ ನಿನ್ನ ನಂಬದ ಪಾಪಿಗೆ |
ಹಾನಿಯಲ್ಲದೆ ಲೇಶಸುಖವು ತೋರದು ದೇವಾ || ೪ ||

ವೆಂಕಟಗಿರಿವಾಸ ವೇದವಂದಿತ ಚರಣ |
ಶಂಖ-ಚಕ್ರಪಾಣಿ ಕರುಣಾಕರಾ ||
ಶಂಖಾಣ ನೃಪವರದ ವಿಜಯವಿಠ್ಠಲ ತಿಮ್ಮ |
ಅಂಕದ ಮೇಲಾಡುವ ಬಾಲನೆಂದು ಬಿಡದೆ || ೫ ||

## ಬೆಳಗು ಜಾವದಿ ಬಾರೊ ಹರಿಯೆ

ರಾಗ—ಮಲಹರಿ ( ತೋಡಿ ) ಆಟತಾಳ ( ದೀಪಚಂದಿ )

ಬೆಳಗು ಜಾವದಿ ಬಾರೊ ಹರಿಯೆ ನಿನ್ನ || ಪ ||

ಚರಣ ತೊಳೆದು ಜಲಪಾನ ಮಾಡುವೆನೊ || ಅ. ಪ. ||

ನೀರೊಳು ನಿನ್ನನು ಕಾಂಬೆ, ಗಿರಿ- |
ಭಾರ ಪೊತ್ತರೆ ನಗುವಳೊ ನಿನ್ನ ರಂಭೆ ||

ಮೋರೆ ತಗ್ಗಿಸಿದರೇನೆಂಬೆ ಅಲ್ಲಿ |
ನಾರಸಿಂಹನಾಗಿ ಪೂಜೆಯಗೊಂಬೆ ॥ ೧ ॥

ಬಲಿಯ ದಾನವ ಬೇಡಿದೆಲ್ಲೊ ನೀ |
ಛಲದಿ ಕ್ಷತ್ರಿಯರ ಸಂಹಾರ ಮಾಡಿದ್ಯೆಲ್ಲೊ ॥
ಛಲವಂತ ನಿನಗೆದುರಿಲ್ಲೊ ನೀ- |
ನೊಲಿದ್ದನುಮನಿಗೆ ಅಜಪದವನಿತ್ತೆಲ್ಲೊ ॥ ೨ ॥

ರುಕ್ಮಿಣೀಶಗೆ ಸಮರಿಲ್ಲೊ, ಕೃಷ್ಣ |
ಬಿಮ್ಮನೆ ತ್ರಿಪುರಸತಿಯರಪ್ಪಿದೆಲ್ಲೊ ॥
ಬ್ರಹ್ಮಾದಿಗಳು ಸಮರಲ್ಲೊ, ಬಲು |
ಹಮ್ಮಿಲಿ ಹಯವೇರಿದ ವಿಜಯವಿಠಲ ॥ ೩ ॥

## ಎಲ್ಲಡಗಿದನೊ ಹರಿ

ರಾಗ—ತೋಡಿ ( ಭೈರವಿ ) ಆದಿತಾಳ ( ದೀಪಚಂದಿ )

ಎಲ್ಲಡಗಿದನೊ ಹರಿ ಎನ್ನಯ ಧೊರಿ || ಪ ||

ಎಲ್ಲೆಲ್ಲಿ ಪರಿಪೂರ್ಣನೆಂಬೊ ಸೊಲ್ಲನು ಮುನ್ನಾ |
ಅಲ್ಲಲ್ಲಿ ಪುಸಿಮಾಡಿ ಮಲ್ಲಮರ್ದನ
ಫುಲ್ಲಲೋಚನ ಹರಿ || ಅ. ||

ಶರಣೆಂದವರ ಕಾಯ್ವ ಕರುಣಾ ಸಮುದ್ರನು |
ತರುಣನ ಅರಿಯದೆ ಹರಿಣಾಂಕನಿಭವಕ್ತ್ರ || ೧ ||

ಕರಿರಾಜನ ಮೊರೆ ಕೇಳಿ ತ್ವರಿತದಿಂದ |
ಗರುಡನೇರಿ ಬಂದ ಗರ್ವರಹಿತ ದೇವ || ೨ ||

ವರ ಭುಜದಲಿ ಶಂಖಚಕ್ರವ ಧರಿಸಿದ |
ಪರಮಸುಂದರ ಮೂರ್ತಿ ಪರಮೇಷ್ಠಿ ಜನಕನು || ೩ ||

ವನಜ ಮಲ್ಲಿಗೆ ಜಾಜಿ ವನದಲ್ಲಿ ಚಲಿಸುವ |
ವನಿತೆಯರಾಟಕ್ಕೆ ಮನಮೆಚ್ಚಿ ನಡೆದಾನೊ || ೪ ||

ಗೋವುಗಳ ಹಿಂದು ಗೋಪಾಲರನು ಕಂಡು |
ಕಾವ ವಿಷಯಕ್ಕಾಗಿ ಕಮಲಲೋಚನ ಹರಿ || ೫ ||

ಇನಚಂದ್ರನಿಭವಕ್ತ್ರ ಕನಕಾಂಬರಧರ |
ವಿನಯದಿಂದಾಡುತ್ತ ಮುಸಿಗಳಲ್ಲಿಗೆ ದೇವ || ೬ ||

ಗಜ ಧ್ರುವ ಬಲಿ ಪಾಂಚಾಲಿ ವರದನೆಂಬ |
ನಿಜವಾದ ಬಿರುದುಳ್ಳ ವಿಜಯವಿಠ್ಠಲರೇಯ || ೭ ||

## ಕರುಣಿಸೋ ಕೃಷ್ಣ ಕರುಣಿಸೊ

ರಾಗ—ಶಂಕರಭರಣ ( ಭೈರವಿ ) ಅಟತಾಳ ( ಕಹರವಾ )

ಕರುಣಿಸೋ ಕೃಷ್ಣ ಕರುಣಿಸೊ |
ಕರುಣಿಸಿದರೆ ನಾ ನಿನ್ನೆಂದಿಗು ಮರೆಯೆ ‖ ಪ ‖

ಭೂತಳದೊಳು ನಾನು ಈ ತನುವು ತೆತ್ತು |
ಪಾತಕದಲಿ ಯಮಯಾತನೆ ಪಟ್ಟೆ ‖ ೧ ‖

ಇಂದೆನ್ನ ಹೃದಯವೆಂಬೊ ಮಂದಿರದೊಳು |
ಬಂದು ವಾಸವಾಗೊ ಇಂದಿರೆರಮಣ ‖ ೨ ‖

ಹಿಂದಿನ ಅವಗುಣ ಒಂದೂ ಎಣಿಸದೆ |
ಮುಂದೆ ಆ ದೋಷಕ್ಕೆ ಮನವೆರಗಿಸದೆ ‖ ೩ ‖

ಪಾಪಪುರುಷನೆಂಬೊ ಪಾಪಿಯ ಕೈಗೆ |
ಪೋಪಗೊಡದೆ ಎನ್ನ ಕಾಪಾಡೊ ರನ್ನಾ ‖ ೪ ‖

ಅಂತ್ಯಕಾಲದಲ್ಲಿ ಅಂತಕರು ಬಂದು |
ನಿಂತಾಗಲಿ ನಿನ್ನ ಚಿಂತೆ ಒದಗಲಿ ‖ ೫ ‖

ಕನಸಿನೊಳಗೆ ನಿನ್ನ ನೆನೆಸಿಕೊಂಬಂತೆ |
ಮನಸು ಸುಸ್ಥಿರವಾಗಿ ಅನುಗಾಲವಿರಲಿ ‖ ೬ ‖

ಇದ್ದಾಗ ದಾಸರದಾಸನೆನಿಸೊ ಬೇಗ |
ಅಬ್ಧಿಶಯನ ಸಿರಿ ವಿಜಯವಿಠ್ಠಲ ಕರುಣಿಸೊ ‖ ೭ ‖

## ನೋಡುನೋಡು ಗರುಡಗಮನನೆ

ರಾಗ—ಕಾಂಬೋದಿ ( ಭೈರವಿ ) ಏಕತಾಳ ( ದಾದರಾ )

ನೋಡು-ನೋಡು ಗರುಡಗಮನನೆ |
ಮಾಡು ದಯವನು ವೇಗದಿ || ಪ ||

ಪಾಡುವೆ ಆನಂದದಲಿ ನಿನ್ನನು |
ಕೊಂಡಾಡುವೆನು ನಿನ್ನ ಮೂರ್ತಿಯಾ || ಅ. ಪ. ||

ಮಂಗಳಾಂಗನೆ ಮನ್ಮಥನ ಪಿತ |
ಸಂಗೀತ ಸುರಲೋಲನೆ ||
ಕಂಗಳಬ್ಬರ ತೀರುವಂತೆ |
ಚರಣಂಗಳನೆ ತೋರೋ ವಿನಯದಿ || ೧ ||

ಪರಮಪುರುಷನೆ ಪುಣ್ಯಶ್ಲೋಕನೆ |
ದುರುಳದೈತ್ಯರ ದಲ್ಲಣ ||
ಮರಿಯಲೀಸದೆ ನಿನ್ನ ಚರಣ |
ಸ್ಮರಣೆ ಒದಗಿಸೊ ವದನಕೆ || ೨ ||

ವಂದನೆಯು ಗೋವಿಂದ ಗೋಪಾಲಾ |
ಮಂದರಧರ ಮಾಧವಾ ||
ಇಂದು ವಿಜಯವಿಠ್ಠಲ ನಿನ್ನ |
ಸಂದರ್ಶನವ ತೋರುತಾ || ೩ ||

## ರಂಗನ ನೋಡಿರೊ

ರಾಗ—ಭೈರವಿ ( ಭೈರವಿ ) ತ್ರಿಪುಟ ತಾಳ ( ದೀಪಚಂದಿ )

ರಂಗನ ನೋಡಿರೊ ಸಿರಿ ನರಸಿಂಗನ ಪಾಡಿರೊ |
ಮಂಗಳಮೂರುತಿ ಡಿಂಗರಿಗರ ಹೃಸ್ಸಂಗ ಕರುಣಾಂತರಂಗಾ || ಪ ||

ತನುಜನ ಜನಕನು ಕೊಲ್ಲಲು ಮೊರೆಯಿಡೆ ಬಂದಾ | ಕಂಭದೊಳಿಂದ |
ಮನುಜಕೇಸರಿ ರೂಪಧರಿಸಿದ ನಿಜ ಲೋಕಸ್ವಾಮಿ | ಅಂತರ್ಯಾಮಿ ||
ದನುಜನ ಉದರ ಬಗೆದು ಕರುಳಮಾಲೆ ಇಟ್ಟಾ | ಕೊರಳೊಳು ಧಿಟ್ಟಾ |
ವನಜ ಭವಾದ್ಯರು ಜಯಜಯವೆನುತಿರೆ ಮೆರೆದಾ | ಪ್ರಹ್ಲಾದವರದಾ ||೧||

ಮನದಲಿ ಬೇಡಿದ ಭಾಗ್ಯವ ಕೊಡುವನು ಚಲುವಾ | ಭಕುತರಿಗೊಲಿವ |
ಅನುದಿನದಲಿ ಅನುಕಂಪನು ಹರಿ ನಮಗೆಲ್ಲಾ | ಭಕ್ತವತ್ಸಲಾ ||
ಘನಮಹಿಮನು ಪರಿಪೂರ್ಣ ಗುಣಾಂಬುಧಿ ತೇಜ | ರಾಜಾಧಿರಾಜ |
ಜನುಮ ಜನುಮದಲಿ ಜನನಾದಿಗಳಿಗೀತ ಮುಖ್ಯ | ಕರ್ತನು ಸಖ್ಯ ||೨||

ಕನಕಮುನೀಶ್ವರ ತಪವನು ಮಾಡಲು ಮೆಚ್ಚಿ | ಬಂದನು ಮೆಚ್ಚಿ |
ಕನಕ ವರುಷವನು ಗರೆವದು ಅಂದಿನ ದಿನದಿ | ಆನಂದವನಧಿ |
ಕನಕ ನೃಕೇಸರಿ ಎನಿಸಿದಾ ಅಂದಿನಾರಭ್ಯಾ| ಈತನೆ ಸಭ್ಯಾ |
ಅನಳನಯನ ರೂಪ ಲಿಂಗಾಕೃತಿಯಾ ಪೊಳೆವಾ | ನುತಿಸಲು
ಸುಳಿವಾ || ೩ ||

ಗುಣದಲಿ ತಿಳಿವದು ರುದ್ರಗೆ ಹರಿರೂಪವಿಲ್ಲಾ | ಇದು ಹುಸಿಯಲ್ಲಾ |
ವನಜನಾಭಗೆ ನಾನಾರೂಪಗಳುಂಟೆಂದು ವೇದಾ | ಪೇಳ್ವದು ನೋಡಾ ||
ಪ್ರಣತನಾಗದ ಇನಿತಾಗದ ಪಾಪಿಷ್ಟ ಮನುಜಾ | ಆವನೇ ದನುಜಾ |
ಗಣನೆ ಮಾಡದಲಿರಿ ಇವರನು ಸುಜನರು ಇಂದೆ| ನಮಗೀತ ತಂದೆ| || ೪ ||

ಇನನಂತೆ ಒಪ್ಪುವ ಪೊಂಪಾ ನಿಧಿಯೊಳು ಧನದಾ | ದಿಕ್ಕಿಲಗಾಧಾ |
ಮುನಿಜನಸಮ್ಮತ ಶ್ರುತಿ ಉಕ್ತಿಗಳಲ್ಲಿ ಅಕ್ಕ | ಕೇಳೀವಾಕು |
ದಣಿದು ನೆಮಿಸಿ ಒಮ್ಮೆ ಧ್ಯಾನವ ಮಾಡಲು ಭಕುತಿ | ಉಂಟು ವಿರಕುತಿ |
ಹನುಮದೀಶ್ವರ ನಮ್ಮ ವಿಜಯವಿಠ್ಠಲ ನರಸಿಂಗಾ| ರಿಪುಗಜಸಿಂಗಾ || ೫ ||

## ಕಾಯೆ ಕರುಣಾಂಬುಧಿಯೆ

ರಾಗ—ತೋಡಿ ( ಭೈರವಿ ) ಆದಿತಾಳ ( ತೀನ್ ತಾಲ )

ಕಾಯೆ ಕರುಣಾಂಬುಧಿಯೆ ಇಂದಿರಾದೇವಿ || ಪ ||

ಕಾಯೆ ಕರುಣಾಂಬುಧಿಯೆ ಮಾಯೆ ನಾರಾಯಣ- |
ಜಾಯೆ ಸತತ ಜ್ಞಾನವೀಯೆ ಭಕ್ತರಪ್ರಿಯೆ || ಅ. ಪ ||

ಕನ್ಯಾಮಣಿಯೆ ಕಾಮಿನಿ ಮಂಗಳವಾಣಿ |
ಸನ್ನುತೆ ಲೋಕಜನನಿ ||
ನಿನ್ನ ಚರಣಯುಗ್ಮವನ್ನು ನಂಬಿದೆ ಸುಪ್ರ- |
ಸನ್ನೆ ಸರ್ವಜೀವ ಭಿನ್ನೆ ಭಾಗ್ಯಸಂಪನ್ನೆ ||
ಮನ್ನಿಸು ದಯದಿ ನೀ ಬಿನ್ನಪ ಲಾಲಿಸಿ |
ಚೆನ್ನೆ ಚಕ್ರಪಾಂಚಜನ್ಯವಿರಾಜಿತೆ || ೧ ||

ಅತಿ ದಯವಂತೆ ನೀನೆಂದು ಬೇಗದಿ ಬಂದು |
ತುತಿಸುವೆ ದೀನ ನಾನೆಂದು ||
ಶತಪತ್ರದೊಳಗದಲೆ ಗತಿಗೆ ಸಮ್ಮತಳಾಗು- |
ತ್ಪತ್ತಿ ಸ್ಥಿತಿಲಯಕರ್ತೆ ಅತುಳಶೋಭನಮೂರ್ತೆ ||
ಕ್ಷಿತಿಯಲಿ ಜನಿಸಿ ನೀ ಪತಿಗೆ ಸತಿಯಾದೆ |
ಸತಿಯ ಸಂಗಡ ಧ್ಯಾನಿತಳಾದ ಚರಿತೆ || ೨ ||

ಕುಂಕುಮಾಂಕಿತೆ ರಾಜಿತೆ ನಿಗಮಗೀತೆ |
ಪಂಕಜಾಸನಮಾತೆ ||
ಲಂಕವತ್ಸಲೆ ಸರ್ವಾಲಂಕಾರಮಯೆ ರವಿ- |
ಸಂಕಾಶೆ ಬಹುಕಾಲ ಸಂಕಟವಿನಾಶೆ ||
ಮಂಕುಮತಿಹರ ವಿಜಯವಿಠ್ಠಲನ |
ಸಂಕಲ್ಪಕೆ ಕಳಂಕ ಬಾರದಂತೆ || ೩ ||

## ಪ್ರಥಮ ದೈವವೇ ಪಂಢರಿರೇಯಾ

ರಾಗ— ವರಾಳಿ ( ಕಾಫಿ ) ತ್ರಿವಿಡಿ ತಾಳ ( ತೀನ್‌ತಾಲ )

ಪ್ರಥಮ ದೈವವೇ ಪಂಢರಿರೇಯಾ |
ಪೃಥ್ವಿಯೊಳಗೆ ಭಾಗೀರಥಿಗೆ ಪಥವ ತೋರಿ || ಪ ||

ಸಕಲಭಯನಾಶ ಸಾತ್ವಿಕ ಮೂರುತಿ |
ಭಕ್ತಜನಪೋಷಕ ನೀನಲ್ಲವೆ ||
ತ್ವಕ್ಕು ಇಂದ್ರಿಯಂಗಳು ನಿನ್ನಾಧೀನವೋ |
ಅಖಿಳ ಬಗೆಯಿಂದ ಮಾತು ಮನ್ನಿಸಿ ಕಾಯೋ || ೧ ||

ಸರ್ವರಂತರಿಯ ಸಿದ್ಧ ಫಲದಾಯಕ |
ಸರ್ವರಲ್ಲಿ ಸ್ವಾಮಿಯೆಂದೆನಿಪ ||
ಸರ್ವ ವಿಘ್ನೋಪಶಾಂತಾ ವೇದಾಂತನೆ |
ಗೀರ್ವಾಣ ಮುನಿನುತ ಗಿರಿಧರ ದೇವಾ || ೨ ||

ಸಾಧು ಮೂರುತಿ ಸಿದ್ಧಫಲದಾ |
ಬೋಧ ಶೇರುತಿ ಆದಿಪರಬೊಮ್ಮ ||
ವಿಜಯವಿಠ್ಠಲರೇಯಾ ನೀನು |
ಈ ಧರೆಯೊಳು ಭೀಮಾತೀರನಿವಾಸಾ || ೩ ||

## ರಾಮಾ ರಘುಕುಲಾಬ್ಧಿ ಸೋಮಾ

ರಾಗ—ಝಂಝೂಟಿ (ಮಾಲಕಂಸ) ಆದಿತಾಳ (ತೀನ್ ತಾಲ)

ರಾಮಾ ರಘುಕುಲಾಬ್ಧಿ ಸೋಮಾ ‖ ಪ ‖

ಸಂತತ ಭಕ್ತಪ್ರೇಮಾ ಮಂಗಲಧಾಮಾ ।
ಪರಿಪೂರ್ಣ ನಿನ್ನಯ ನಾಮವೇ ಗತಿ ಎನಗೆ ‖ ಅ. ಪ. ‖

ಏಸಪರಾಧಗಳೆಣಿಸದೆ ದಯಮಾಡಿಟ್ಟು ।
ದೋಷದೂರನ ಮಾಡೊ ಕೇಶವ ಕಮಲಾಕ್ಷಾ ‖ ೧ ‖

ಪ್ರಣವಾಕಾರ ವಿಮಾನ ಮನಿಯಾಗಿಯಿಪ್ಪನೆ ।
ಫಣಿಶಾಯಿ ರಂಗೇಶ ಮಣಿಗಣಭೂಷಣನೆ ‖ ೨ ‖

ಇಕ್ಷ್ವಾಕು ನೃಪವರದ ಸಾಕ್ಷಾತ್ಪರಮಾತ್ಮಾ- ।
ಧ್ಯಕ್ಷ ವಿಜಯವಿಠ್ಠಲಾ ರಕ್ಷಿಸು ಬಿಡದೆನ್ನ ‖ ೩ ‖

## ರಾಮರಾಮ ಎಂಬೆರಡಕ್ಷರ

ರಾಗ—ಧನ್ಯಾಸಿ (ಮಾಂಡ್) ಆದಿತಾಳ (ಕಹರವಾ)

ರಾಮರಾಮ ಎಂಬೆರಡಕ್ಷರ ।
ಪ್ರೇಮದಿ ಸಲುಹಿತು ಸುಜನರನು ‖ ಪ ‖

ಹಾಲಾಹಲವನು ಪಾನವ ಮಾಡಿದ ।
ಫಾಲಲೋಚನನೆ ಬಲ್ಲವನು ‖
ಆಲಾಪಿಸುತ ಶಿಲೆಯಾಗಿದ್ದ ।
ಬಾಲೆ ಅಹಲ್ಯೆಯ ಕೇಳೇನು ‖ ೧ ‖

ಅಂಜಿಕೆಯಿಲ್ಲದೆ ಗಿರಿ ಸಾರಿದ ಕಪಿ- |
ಕುಂಜರ ರವಿಸುತ ಬಲ್ಲವನು ||
ಎಂಜಲ ಫಲಗಳ ಹರಿಗರ್ಪಿಸಿದ |
ಕಂಜಲೋಚನೆಯ ಕೇಳೇನು || ೨ ||

ಕಾಲವನರಿತು ಸೇವೆಯ ಮಾಡಿದ |
ಲೋಲ ಲಕ್ಷ್ಮಣನೆ ಬಲ್ಲವನು ||
ವ್ಯಾಳಶಯನ ಶ್ರೀ ವಿಜಯವಿಠ್ಠಲನ |
ಲೀಲೆ ಶರಧಿಯ ಕೇಳೇನು || ೩ ||

## ಸೀತೆಯು ಭೂಮಿಜಾತೆಯು

ರಾಗ—ಸಾವೇರಿ ( ಭೂಪ ) ಅಟತಾಳ ( ದೀಪಚಂದಿ )

ಸೀತೆಯ ಭೂಮಿಜಾತೆಯ ಜಗ- |
ನ್ಮಾತೆಯ ಸ್ಮರಿಸಿ ವಿಖ್ಯಾತೆಯ || ಪ ||

ಕ್ಷೀರ ವಾರಿಧಿಯ ಕುಮಾರಿಯ ತನ್ನ |
ಸೇರಿದವರ ಭಯಹಾರಿಯ ||
ತೋರುವಳು ಮುಕ್ತಿದಾರಿಯ ಸರ್ವ- |
ಸಾರ ಸುಂದರ ಶ್ರೀನಾರಿಯ || ೧ ||

ಈಶಕೋಟಿಯೊಳ್ ಗಣನೆಯ ಸ್ವಪ್ರ- |
ಕಾಶವಾದ ಗುಣಶ್ರೇಣಿಯ ||
ಈಶಾದ್ಯರ ಪೆತ್ತ ತರುಣಿಯ ನಿ- |
ದೋ೯ಷ ವಾರಿಧಿಕಲ್ಯಾಣಿಯ || ೨ ||

ವಿಜಯವಿಠ್ಠಲನ್ನ ರಾಣಿಯು ಪಂ- |
ಕಜ ಮಾಲೆ ಪಿಡಿದ ಪಾಣಿಯು ||
ವಿಜಯಲಕ್ಷ್ಮಿ ಗಜಗಮನೆಯ ನಿತ್ಯ |
ಸುಜನವಂದಿತೆ ಅಹಿವೇಣಿಯು || ೩ ||

## ಸೇರಿದೆ ನಿನ್ನ ವೆಂಕಟರನ್ನ

ರಾಗ—ಕೇದಾರಗೌಳ [ ಪೂರಿಯಾ ಧನಶ್ರೀ ] ತ್ರಿವಿಟ ತಾಳ [ ತೀನ್ ತಾಲ ]

ಸೇರಿದೆ ನಿನ್ನ ವೆಂಕಟರನ್ನ ಪಾಲಿಸು ಎನ್ನ ಅ- |
ಪಾರ ಜನುಮಕ್ಕೆ ನೀನೇ ದೈವವೆಂದು || ಪ ||

ಶೂನ್ಯಜ್ಞನು ನಾನು ಅನ್ಯಥಾ ಗತಿ ಅರಿಯೆ |
ಅನ್ಯರಲ್ಲಿಗೆ ಕೊಡದೆ ಧನ್ಯನ ಮಾಡೊ ಬಿಡದೆ || ೧ ||

ಕಲ್ಪತರುವೆ ಎಂದು ವಪ್ಪದಿಂದಲಿ ಬಂದೆ |
ಅಲ್ಪರಿಯದಂತೆ ನಾಗತಲ್ಪನೆ ಫಲವೀಯೋ || ೨ ||

ವರುಷಾವರುಷ ಹೀಗೆ ದರುಶನ ಕೊಡು ಎನಗೆ |
ಹರುಷವಾಗಲಿ ಪರಮಪುರುಷ ವಿಜಯವಿಠ್ಠಲಾ || ೩ ||

## ಬಾರೋ ಮನೆಗೆ ಬಾರೋ ವೆಂಕಟರಮಣಾ

ರಾಗ--ಶಂಕರಾಭರಣ [ ಮಾಂಡ್ ] ಆದಿತಾಳ [ ಕಹರುವಾ ]

ಬಾರೋ ಮನೆಗೆ ಬಾರೋ ವೆಂಕಟರಮಣಾ || ಪ ||

ಕಂಸಾಸುರಮರ್ದನನೆ ಬಾರೊ |
ಕೌಶಿಕಯಜ್ಞಪ ಬಾರೊ ||
ಹಂಸಡಿಬಿಕನಂತಕ ಬಾರೊ |
ಹಂಸವಾಹನನ ಪಿತನೆ ಬಾರೋ || ೧ ||

ಸಾಸಿರಮುಖನ ಪೆತ್ತವನೆ ಬಾರೊ |
ಸಾಸಿರಗಣ್ಣನ ಅನುಜ ಬಾರೊ ||
ಸಾಸಿರವದನಶಯನ ಬಾರೊ |
ಭೂಸುರರಿಗೆ ಪ್ರಿಯನೆ ಬಾರೊ || ೨ ||

ವಾರಿಧಿಯೊಳು ಪೊಕ್ಕವನೆ ಬಾರೊ |
ವಾರಿಧಿಯ ಮಾನಭಂಗನೆ ಬಾರೊ ||
ವಾರಿಧಿಸುತೆಯ ಪಡೆದ ಕರುಣಾ- |
ವಾರಿಧಿ ಸಿರಿ ವಿಜಯವಿಠ್ಠಲ ಬಾರೊ || ೩ ||

## ಎಂತು ವರ್ಣಿಪೆನಮ್ಮ ಮ್ಮಾ

( ಯಂತ್ರೋದ್ಧಾರಕ ಪ್ರಾಣದೇವರ ಸ್ತುತಿ )

ರಾಗ—ಅಹರಿ [ ಕಾಫಿ ] ಆದಿತಾಳ [ ತೀನ್ ತಾಲ್ ]

ಎಂತು ವರ್ಣಿಪೆನಮ್ಮ ಮ್ಮಾ |
ಯಂತ್ರೋದ್ಧಾರಕನಾಗಿ ಮೆರೆವನಾ || ಪ ||

ಕೋತಿರೂಪದಲಿ ಬಂದು |
ಭೂತಳಕೆ ಬೆಡಗು ತೋರಿ ||
ಈ ತುಂಗಭದ್ರೆಯಲ್ಲಿ |
ಖ್ಯಾತಿಯಾಗಿಪ್ಪ ಯತಿಯಾ || ೧ ||

ಸುತ್ತಲು ವಾನರ ಬದ್ಧ ।
ಮತ್ತೆ ವಲಯಾಕಾರ ಮಧ್ಯ ॥
ಚಿತ್ರಕೋಣ ಅದರೊಳು ।
ನಿತ್ಯದಲಿಯಿಪ್ಪ ಯತಿಯಾ ॥ ೨ ॥

ವ್ಯಾಸ ಮುನಿರಾಯರಿಂದ ।
ಈ ಶಿಲೆಯೊಳಗೆ ನಿಂದು ॥
ಶ್ರೀಶ ವಿಜಯವಿಠ್ಠಲನ್ನ ।
ಏಸು ಬಗೆ ತುತಿಪನ್ನ ॥ ೩ ॥

## ಭಾರತೀ ಭವಹಾರಿಯೇ

( ಭಾರತೀದೇವಿಯ ಸ್ತುತಿ )

ರಾಗ—ತೋಡಿ [ ಭೈರವಿ ] ಆದಿತಾಳ [ ತೀನ್‌ತಾಲ ]

ಭಾರತೀ ಭವಹಾರಿಯೆ । ಭಕ್ತರ ಪ್ರಿಯೆ ।
ಭಾರತೀ ಭವಹಾರಿಯೇ ॥ ಪ ॥

ಈರೈದು ಇಂದ್ರಿಯಗಳು ಗಾರು ।
ಮಾಡದಂತೆ ಸಾಕಾರವಾಗಿ ಪಾಲಿಸು ॥ ಅ. ಪ ॥

ಮತಿವಂತನ ಮಾಳ್ಪುದು । ಇದಕೆ ನಿನ್ನ ।
ಪತಿಯ ಈಗಲೆ ಕೇಳ್ವುದು ।
ಕ್ಷಿತಿಯೊಳು ಹೀನರ ಸ್ತುತಿಸಲರಿಯೆ ಮು- ।
ಕುತಿ ಮಾರ್ಗವ ತೋರಿ ಭಕುತಿ ಬೇಗ ಒದಗಿಸು ॥ ೧ ॥

ಮಹತತ್ತ್ವದಭಿಮಾನಿ ಏ । ಕಲಿರಹಿತೆ ।
ಅಹಿಪತಿ ಅಪ್ಪ ಖಗಪ ಜನನೀ ॥

ಮಹಾಪ್ರಮಾಣು ವ್ಯಾಪ್ತಿ ಸರ್ವಜೀವರ |
ದೇಹದಲಿ ನಿಂದು ಶ್ರೀಹರಿ ಆರಾಧನೆಯ ರಹಸ್ಯವ || ೨ ||

ಶರಣು ಶರಣು ಗುಣಮಣಿ | ಚಂದ್ರಪ್ರಕಾಶೆ |
ಪರಮಪಾವನಿ ಕಲ್ಯಾಣಿ ತರತಮ್ಯ ಭಾವದಿ ||
ಅರಿದು ಕೊಂಡಾಡುವ ಚರಿತೆ ಇರಲಿ ವಿ. |
ಸ್ಮರಣೆಯಾಗದಂತೆ ವಿಜಯವಿಠ್ಠಲನ್ನ ನಿರುತ
ಪೊಂದಿಸು || ೩ ||

## ಗುರುವಂಶಕೆ ನಮೋ ಎಂಬೆ

ರಾಗ—ಪಾಡಿ ( ಪಹಾಡಿ ) ಆದಿತಾಳ ( ಕಹರವಾ )

ಗುರುವಂಶಕೆ ನಮೋ ಎಂಬೆ ನಮ್ಮ |
ಮರುತಮತಾಬ್ಧಿಗೆ ನಮೋ ಎಂಬೆ || ಪ ||

ಶ್ರೀಮದಾನಂದತೀರ್ಥ ಪದ್ಮನಾಭರಿಗೆ |
ರಾಮದೇವರ ತಂದ ನರಹರಿಗೆ ||
ಕಾಮಿತ ಫಲವೀವ ಮಾಧವ ಕ್ಷೋಭ್ಯರಿಗೆ |
ಆ ಮಹಾಮಹಿಮ ಜಯತೀರ್ಥರಾಯರಿಗೆ || ೧ ||

ವಿದ್ಯಾಧಿರಾಜರಿಗೆ ವಿಜಯ ಕವೀಂದ್ರ ಸು- |
ಸದ್ಗುಣ ವಾಗೀಶ ರಾಮಚಂದ್ರರಿಗೆ ||
ವಿದ್ಯಾನಿಧಿ ರಘುನಾಥ ರಘುವರ್ಯತೀರ್ಥರಿಗೆ |
ಅದ್ವೈತಮತ ಖಂಡ ರಘೋತ್ತಮರಾಯರಿಗೆ || ೨ ||

ವೇದವ್ಯಾಸ ವಿದ್ಯಾಧೀಶ ವೇದನಿಧಿಮುನಿಗೆ |
ಸಾಧುಜನಪ್ರಿಯ ನಿತ್ಯವ್ರತರಿಗೆ ||
ಮೇದಿನಿಯಲ್ಲಿ ಮೆರೆದ ಸತ್ಯನಿಧಿತೀರ್ಥರಿಗೆ |
ವಾದಿಗಜಕೆ ಸಿಂಹ ಸತ್ಯನಾಥರಿಗೆ || ೩ ||

ಯತಿಶ್ರೇಷ್ಠ ಸತ್ಯಾಭಿನವತೀರ್ಥರಿಗೆ |
ಸತತ ಸಜ್ಜನಪಾಲ ಸತ್ಯಪೂರ್ಣರಿಗೆ ||
ಅತಿಶಯವಾನಂದ ಸತ್ಯವಿಜಯರಿಗೆ |
ಮತಉದ್ಧಾರಕ ಶ್ರೀಸತ್ಯಪ್ರಿಯರಿಗೆ || ೪ ||

ಇಂತು ಗುರುಗಳ ಸಂತತಿ ಕೊಂಡಾಡಿ |
ಇಂತು ಸಂತಾಪವನುರುಹಿ ಬಿಟ್ಟು ||
ಸಂತೋಷಿ ನಾನಾದೆ ವಿಜಯವಿಠ್ಠಲನ್ನ |
ಚಿಂತಿಯ ಮಾಡುವೆ ದಾಸರ ದಯದಿಂದ || ೫ ||

## ಈತನೀಗ ಭಾರತೀಶನು

ರಾಗ--ವರಾಳಿ ( ದೇಸ್ ) ಆಟತಾಳ ( ದಾದರಾ )

ಈತನೀಗ ಭಾರತೀಶನು ತನ್ನ ಪ್ರೀತಿಸುವರ |
ಮನದ ಮಾತು ಸಲಿಸಿ ಮುಕುತಿ ಈವ || ಪ ||

ಶರಧಿ ಜಿಗಿದು ಹಾರಿ ಲಂಕಾಪುರವ ಶೋಧಿಸಿ |
ಹರಿಯ ರಾಣಿಗೆ ಕುರುಹನಿತ್ತು ಮರಗಳುರುಹಿ ||
ಮುರಿದು ಧರೆಗೆ ವರಿಸಿದಾತಾ || ಅ. ಪ ||

ಧುರದೊಳಕ್ಷನ ಹರಣವಳಿದು |
ಗರುವರ್ದ್ಧತ್ತುಶಿರನ ಜರಿದು ||
ಸರ್ರನೆ ನಗರ ಉರುಪಿ ಮುರಳಿ |
ಹರಿಯ ಚರಣಕ್ಕೆರಗಿದಾತಾ || ೧ ||

ಕುರುನಿಕರವ ತರುಬಿ ಬೊ- |
ಬ್ಬಿರಿದು ನಿಂದುರವಣಿಸಿ ಎದುರಾ- ||
ದರಿಗಳ ಶಿರ ತರೆದು ತಳೋ- |
ದರಿಯ ಹರುಷಬಡಿಸಿದಾತಾ || ೨ ||

ಕರಿಯು ತೆರದಿ ದುಷ್ಟ ಸಂಕರನು |
ತಿರುಗಲವನ ಮುರಿದು ಮತ್ತೆ ||

ಮರುತ ಮತದ ಬಿರುದನೆತ್ತಿ- |
ಪರನೆ ವಿಜಯವಿಠ್ಠಲನೆಂದಾ || ೩ ||

## ಪರಮಯೋಗಿಯ ನೋಡಿರೊ

ರಾಗ—ಕಲ್ಯಾಣಿ ( ಮಾಲಕಂಸ ) ತ್ರಿವಿಡಿತಾಳ ( ತೀನ್ ತಾಲ್ )

ಪರಮಯೋಗಿಯ ನೋಡಿರೊ ನೀವೆಲ್ಲರು |
ಪರಮಯೋಗಿಯ ನೋಡಿರೊ ||
ಪರಮಯೋಗಿಯ ನೋಡಿ ಪ್ರೀತಿವಂತರಾಗಿ |
ನಿರಯವ ಕಳೆದು ಆನಂದ ಬೇಡುವರೆಲ್ಲ || ಪ ||

ವಾನರ ವೇಷನಾಗಿ ಪರ್ವತ ಸೇರಿದಾ |
ಭಾನುನಂದನ ಮನೋಬಯಕೆಯ ಸಲ್ಲಿಸಿ ||
ಏನೆಂಬೆ ಬಲು ಒಂದು ರೂಪವಾಗಿ ತೋರಿ |
ತಾನೆ ತನ್ನೊಳಗೆದ್ದು ದುರುಳರ ಮೋಹಿಸಿದಾ || ೧ ||

ವಿಷವನುಂಡು ಮೂರು ಲೋಕದೊಳಗೆ ಮೆರೆದು |
ಅಸುರ ಬಕನ ಸೀಳಿ ಧರಿಗೆ ಬಿಸುಟಿ ||
ಶಶಿಮುಖಿಯಳಿ ಪ್ರೀತಿಬಡಿಸಿ ಅರ್ಜುನಗೊಲಿದು |
ಶಶಿಕುಲದಲಿ ಪುಟ್ಟಿ ದುರ್ಜನ ಸಂತಾಪಬಡಿಸಿ || ೨ ||

ಯತಿಯಾಗಿ ಜನಿಸಿ ಸುವಾಕ್ಯವ ಬಯಸಿ |
ಮತಿಹೀನ ಜನರ ಶಾಸ್ತ್ರವ ಖಂಡಿಸಿ ||
ತುತಿಸಿದ ಭಕ್ತರ್ಗೆ ಗತಿಯ ಕೊಡುವ ಪ್ರಾಣ- |
ಪತಿ ವಿಜಯವಿಠ್ಠಲ ಬದರಿನಿಲಯ ನಿತ್ಯಪರಮ || ೩ ||

## ಮಧ್ವಮತವ ಪೊಂದದವನ ಭಕುತಿಯಾತಕೆ

ರಾಗ — ಸೌರಾಷ್ಟ್ರ ( ದೇಸ್ ) ಆದಿತಾಳ ( ದಾದರಾ )

ಮಧ್ವಮತವ ಪೊಂದದವನ ಭಕುತಿಯಾತಕೆ ॥ ಪ ॥

ಊರ್ಧ್ವಪುಂಡ್ರ ತಿದ್ದದವನ ಕರ್ಮವ್ಯಾತಕೆ ॥ ಅ ಪ ॥

ದಾನವನ್ನು ಮಾಡದವನ ದ್ರವ್ಯವ್ಯಾತಕೆ ।
ಸ್ನಾನವನ್ನು ಮಾಡದವನ ಮೌನವ್ಯಾತಕೆ ॥
ಮಾನಿನಿಯು ಇಲ್ಲದವನ ಬದುಕು ಯಾತಕೆ ।
ಧ್ಯಾನವನ್ನು ಅರಿಯದವನ ಪೂಜೆ ಯಾತಕೆ ॥ ೧ ॥

ವಂಶವನ್ನುದ್ಧರಿಸದಂಥ ಮಗನು ಯಾತಕೆ ।
ಹಿಂಸೆಯನ್ನು ಪಡಿಸುವಂಥ ಅರಸು ಯಾತಕೆ ।
ಸಂಸಾರವನು ಒಲ್ಲದಂಥ ಸತಿಯು ಯಾತಕೆ ।
ಕಂಸಾರಿಯನು ತಿಳಿಯದಂಥ ಜ್ಞಾನವ್ಯಾತಕೆ ॥ ೨ ॥

ಬಂಧು ಬಳಗ ಬಿಟ್ಟು ಉಂಬ ನೆಂಟರ್ಯಾತಕೆ ।
ಕಂದರನ್ನು ಮಾರುತಿಪ್ಪ ತಂದೆಯಾತಕೆ ॥
ಬಂದ ಅತಿಥಿಗನ್ನವಿಕ್ಕದ ಸದನವ್ಯಾತಕೆ ।
ನಿಂದೆಗಳನು ಮಾಡುತಿಪನಾಚಾರವ್ಯಾತಕೆ ॥ ೩ ॥

ಗುರೂಪದೇಶವಿಲ್ಲದಂಥ ಮಂತ್ರವ್ಯಾತಕೆ ।
ಹಿರಿಯರನ್ನು ಸಾಕದವನ ಪುಣ್ಯವ್ಯಾತಕೆ ॥
ಚರಿಸಿ ತೀರ್ಥಯಾತ್ರೆ ಮಾಡದ ದೇಹವ್ಯಾತಕೆ ।
ವರ-ಪ್ರಸಾದವೀಯದಂಥ ದೇವರ್ಯಾತಕೆ ॥ ೪ ॥

ಏಕಾದಶಿಯ ಮಾಡದವನ ವ್ರತವು ಯಾತಕೆ |
ಏಕಮನಸು ಇಲ್ಲದವನ ನಡತೆ ಯಾತಕೆ ||
ಸಾಕಿದವನ ಕೊಲ್ಲುವಂಥ ಬಂಟನ್ಯಾತಕೆ |
ಲೋಕವಾರ್ತೆ ಬಿಡದವನ ಜಪವು ಯಾತಕೆ || ೫ ||

ಭಾಷೆ ಬದ್ಧವಿಲ್ಲದವನ ಮಾತು ಯಾತಕೆ |
ಕಾಸುವೀಸಕೆ ಬಡಿದಾಡುವ ಅನುಜರ್ಯಾತಕೆ ||
ಲೇಸು ಹೊಲ್ಲಹ ನೋಡದಂಥ ಗೆಳೆಯನ್ಯಾತಕೆ |
ಆಸೆಯನ್ನು ಬಿಡದ ಸನ್ಯಾಸವ್ಯಾತಕೆ || ೬ ||

ತಪ್ತ ಮುದ್ರೆಯಿಲ್ಲದವನ ಜನ್ಮವ್ಯಾತಕೆ |
ಗುಪ್ತದಲ್ಲಿ ನಡೆಯದಿಪ್ಪ ದಾಸನ್ಯಾತಕೆ ||
ಆಪ್ತಬಂಧು ವಿಜಯವಿಠಲನಶ್ರೀಚರಣದಿ |
ಕ್ಲಪ್ತಮೀರದೆ ನಡೆದ ಮೇಲೆ ನರಕವ್ಯಾತಕೆ || ೭ ||

## ಮಧ್ವರಾಯರ ಕರುಣ ಪಡೆಯದವ

( ಮಧ್ವಾಚಾರ್ಯಸ್ತುತಿ )

ರಾಗ--ಕಾಂಬೋದಿ [ ಝಂಪೆ ] ಅಟತಾಳ [ ದೀಪಚಂದಿ ]

ಮಧ್ವರಾಯರ ಕರುಣ ಪಡೆಯದವ |
ಧರೆಯೊಳಗೆ ಇದ್ದರೇನು ಇಲ್ಲದಿದ್ದರೇನು || ಪ ||

ಮಧ್ವಮತವೇ ಮತವು ಸಕಲಶ್ರುತಿ ಸಮ್ಮತವು |
ಮಧ್ವರಾಯರ ಧ್ಯಾನ ಅಮೃತಪಾನ ||
ಮಧ್ವರಾಯರ ಲೀಲೆ ನವರತುನದಾ ಮಾಲೆ |
ಮಧ್ವೇಶನಾ ಸ್ಮರಣೆ ಕುಲಕೋಟಿ ಉದ್ಧರಣೆ || ೧ ||

ಮಧ್ವರಾಯರ ಕಥೆಯ ಕೇಳಲದು ದುರಿತಹತ |
ಮಧ್ವರಾಯರ ಭಕುತಿ ಮಾಡೆ ಮುಕುತಿ ||
ಮಧ್ವರಾಯರ ಸ್ತೋತ್ರ ಮಾಡಿದವ ಸತ್ಪಾತ್ರ |
ಮಧ್ವರಾಯರ ಭಜನೆ ದುಷ್ಕರ್ಮ ತ್ಯಜನೆ ‖ ೨ ‖

ಮಧ್ವರಾಯರ ದಾಸನಾದವನೆ ನಿರ್ದೋಷ |
ಮಧ್ವರಾಯರ ಬಂಟ ಜಗಕೆ ನೆಂಟ ||
ಮಧ್ವರಮಣಾ ನಮ್ಮ ವಿಜಯವಿಠ್ಠಲನಾದ |
ಮಧ್ವೇಶನಾ ಕರುಣ ಪಡೆದವನೆ ಶರಣ ‖ ೩ ‖

## ಸಾರಿ ಭಜಿಸಿರೋ ಟೀಕಾಚಾರ್ಯರಂಘ್ರಿಯಾ

ರಾಗ– ಆರಭಿ ( ಭೈರವಿ ) ಝಾಪುತಾಳ ( ದೀಪಚಂದಿ )

[ ಗೋಪೀ ಗೀತೆಯಂತೆ ]

ಸಾರಿ ಭಜಿಸಿರೋ ಟೀಕಾಚಾರ್ಯರಂಘ್ರಿಯಾ ‖ ಪ ‖

ಘೋರಪಾತಕಾಂಬುಧಿಯ ದೂರ ಮಾಳ್ಪರ ‖ ಅ. ಪ ‖

ಮೋದತೀರ್ಥರ ಮತವ ಸಾಧಿಸುವರ |
ಪಾದಸೇವ್ಯರ ದುರ್ಬೋಧ ಕಳೆವರ ‖ ೧ ‖

ಭಾಷ್ಯತತ್ತ್ವವ ಸುವಿಶೇಷ ಮಾಳ್ಪರ |
ದೋಷದೂರರ ವಾಸವಾದಿ ರೂಪರ ‖ ೨ ‖

ಶ್ಯಾಮಸುಂದರ ಹಾಗೆ ಪ್ರೇಮಪೂರ್ಣರ |
ನೇಮನಿತ್ಯದ ನಿಷ್ಕಾಮನಾ ವರ ‖ ೩ ‖

ಮೋಕ್ಷದಾತರ ಅಕ್ಷೋಭ್ಯತೀರ್ಥರ ಅ- |
ಶಿಕ್ಷಿತಾದರ ಅಪೇಕ್ಷರಹಿತರ || ೪ ||

ವಿಜಯವಿಠಲನ ಅಂಘ್ರಿ ಭಜನೆ ಮಾಳ್ಪರ |
ಕುಜನಭಂಜರ ದಿಗ್ವಿಜಯರಾಯರ || ೫ ||

## ಟೀಕಾಚಾರ್ಯರ ಪಾದ

ರಾಗ—ಸಾವೇರಿ ( ಭೂಪ ) ತ್ರಿಪುಟತಾಳ ( ದೀಪಚಂದಿ )

ಟೀಕಾಚಾರ್ಯರ ಪಾದ | ಸೋಕಿದ ಕೊನೆ ಧೂಳಿ || ಪ ||

ತಾಕಿದ ಮನುಜರಿಗೆ ಕುಬುದ್ಧಿಗಳಿಲ್ಲ ಪರಿಹಾರವಾಗುವವೋ |

ಬೇಕಾದ ಪದವಿಯ ಕೊಡುವನು ಶ್ರೀಹರಿ || ಅ. ಪ ||

ಮಧ್ವಮತವೆಂಬ ಅಬ್ಧಿಯೊಳಗೆ ಪೂರ್ಣ |
ಉದ್ಭವಿಸಿದ ಚಂದ್ರನಾ ಗುಣಪೂರ್ಣನಾ ||
ಅದ್ವೈತಮತ ತಮಸಿಧಿ ಸಿಶಿಕುಠಾರ |
ವಿದ್ಯಾರಣ್ಯನ ಗರುವಿಕೆ ಪರಿಹಾರ || ೧ ||

ತತ್ತ್ವವಾರಿಧಿಗಳ ತತ್ತ್ವಸುಧೆಯ ಭಾಷ್ಯ |
ವಿಸ್ತರಿಸಿ ಇರಲು ಬೇಗದಲಿ ||
ಚಿತ್ತವಲ್ಲಭನ ಸೇವೆಯ ಮಾಡಿ ಟೀಕಂಗಳ |
ಸುತ್ತೇಳು ಲೋಕಕ್ಕೆ ಪ್ರಕಟಿಸಿ ಮೆರೆವರ || ೨ ||

ಎಂದಿಗಾದರು ಒಮ್ಮೆ ಕೊನೆನಾಲಿಗೆಯಿಂದ |
ಬಿಂದು ಮಾತ್ರವು ನೆನೆಯೆ ||
ಮಂದಮತಿಯಾದರೂ ಅಜ್ಞಾನನಾಶವು |
ಸಂದೇಹವಿಲ್ಲವು ಆವಾವ ಕಾಲಕ್ಕೆ || ೩ ||

'ಜ' ಎಂದು ಪೊಗಳಲು ಜಯಶೀಲನಾಗುವ |
'ಯ' ಎನ್ನೆ ಯಮರಾಯನಂಜುವನು ||
'ತೀ' ಎಂದು ಪೊಗಳಲು ತೀವ್ರ ಪದವಿ ಉಂಟು |
'ರ್ಥ' ಎಂದು ಪೊಗಳಲು ತಾಪತ್ರಯಉಪಶಮನ || ೪ ||

ಯೋಗಿ ಅಕ್ಷೋಭ್ಯತೀರ್ಥರ ಕರಕಮಲ ಸಂಜಾತ |
ಭಾಗವತರ ಸುಪ್ರೇಮ ||
ಕಾಗಿಣಿತೀರದ ಮಳಖೇಡ ನಿವಾಸಾ |
ಶ್ರೀಗುರು ವಿಜಯವಿಠ್ಠಲನ ಸೇವಕಭಕ್ತಾ || || ೫ ||

## ಗುರು ಪುರಂದರದಾಸರೇ

ರಾಗ--ಮಣಿರಂಗು [ ಹಂಸಧ್ವನಿ ]        ಛಾಪುತಾಳ [ ರೂಪಕ ]

ಗುರುಪುರಂದರದಾಸರೇ ನಿಮ್ಮ ಚರಣಸರಸಿಜ ನಂಬಿದೆ || ಪ ||

ಗರುವರಹಿತನ ಮಾಡಿ ಎನ್ನನು ಪೊರೆವ ಭಾರವು ನಿಮ್ಮದೆ ||ಅ.ಪ.||

ಒಂದು ಅರಿಯದ ಮಂದಮತಿ ನಾನಿಂದು ನಿಮ್ಮನು ವಂದಿಪೆ |
ಇಂದಿರೇಶನ ತಂದು ತೋರಿಸಿ ತಂದೆ ಮಾಡೆಲೊ ಸತ್ಕೃಪೆ || ೧ ||

ಪುರಂದರಗಡದೊಳಗೆ ನಿಂದು ನಿರುತ ದ್ರವ್ಯವ ಗಳಿಸಿದೆ |
ಪರಮಪುರುಷನು ವಿಪ್ರನಂದದಿ ಕರವ ನೀಡಿ ಯಾಚಿಸೆ || ೨ ||

ಪರಮ ನಿರ್ಗುಣ ಮನವನರಿತು ಹರಿಗೆ ಸೂರೆಯ ನೀಡುತ |
ಅರಿತು ಮನದೊಳು ಹರಿದು ಭವಗಳ ತರುಣಿ ಸಹಿತಾ ಹೊರಟನೆ || ೩ ||

ಮಾರಜನಕನ ಸನ್ನಿಧಾನದಿ ಸಾರಗಾನವ ಮಾಡುವ |
ನಾರದರೆ ಈ ರೂಪದಿಂದಲಿ ಚಾರುದರುಶನ ತೋರಿದ || ೪ ||

ಅಜಭವಾದಿಗಳರಸನಾದ ವಿಜಯವಿಠಲನ ಧ್ಯಾನಿಪ |
ನಿಜ ಸುಜ್ಞಾನವ ಕೊಡಿಸಬೇಕೆಂದು ಭಜಿಪೆನೊ ಕೇಳ್ ಗುರುವರ ||೫||

## ಅಡಿಗಳಿಗೊಂದಿಪೆ ಪುರಂದರ ಗುರುವೆ

ರಾಗ--ಭೈರವಿ [ ಭೂಪ ] ಅಟತಾಳ [ ತೀನ್ ತಾಲ ]

ಅಡಿಗಳಿಗೊಂದಿಪೆ ಪುರಂದರ ಗುರುವೆ || ಪ ||

ಕಡು ಜ್ಞಾನ-ಭಕ್ತಿ-ವೈರಾಗ್ಯದ ನಿಧಿಯೆ || ಅ. ಪ ||

ವರ ಮಧ್ವಮತ ಕ್ಷೀರಾಂಬುಧಿಗೆ ಚಂದ್ರನಾದೆ |
ಗುರು ವ್ಯಾಸರಾಯರಿಂದುಪದೇಶಗೊಂಡೆ ||
ಎರಡೆರಡು ಲಕ್ಷದಿಪ್ಪತ್ತೈದು ಸಾವಿರ |
ವರ ನಾಮಾವಳಿ ಮಾಡಿ ಹರಿಗೆ ಅರ್ಪಿಸಿದೆ || ೧ ||

ಗಂಗಾದಿ ಸಕಲ ತೀರ್ಥಂಗಳ ಚರಿಸಿ ತು- |
ರಂಗ ವದನ ವೇದವ್ಯಾಸನ ||
ಹಿಂಗದೆ ಮನದಲ್ಲಿ ನೆನೆದು ನೆನೆದು ಮರೆವ |
ಮಂಗಳಮಹಿಮೆಯನುತಿಸಿ ನುತಿಸಿ ನಾ || ೨ ||

ನಿನ್ನತಿಶಯಗುಣ ವರ್ಣಿಸಲಳವಲ್ಲ |
ನಿನ್ನ ಸೇವಕನ ಸೇವಕನೆಂತೆಂದು ||
ಪನ್ನಗಶಯನ ಮುಕುಂದ ಕರುಣ ಪ್ರ- |
ಸನ್ನ ವಿಜಯವಿಠ್ಠಲ ಸಂಪನ್ನ || ೩ ||

## ಪರಮ ಮಂಗಳಮೂರುತಿ

ರಾಗ--ಸೌರಾಷ್ಟ್ರ [ ಭೈರವಿ ]  ತ್ರಿವಿಡಿತಾಳ [ ತೀನ್‌ತಾಳ ]

ಪರಮ ಮಂಗಳಮೂರುತಿ ದಿವ್ಯಕೀರುತಿ
ಧರೆಯೊಳಗಿದೆ ವಾರುತಿ || ಪ ||

ಕರುಣಾಪಯೋನಿಧಿಯೆ ಕರವ ಪಿಡಿದು ಎನ್ನ
ಕರಣಶುದ್ಧನ ಮಾಡೊ ಕರವ ಮಸ್ತಕ ಬಾಗಿಪೆ || ೧ ||

ರಾಘವೇಂದ್ರರ ಪಾದ ಲಾಘವ ಮತಿಯಲ್ಲಿ |
ಶ್ಲಾಘನ ಮಾಡಿದ ಮಾಘಧರನ ಪ್ರಿಯ || ೨ ||

ನಿರುತ ಮಂತ್ರಾಲಯ ಪುರವಾಸಾ ಅಘನಾಶಾ |
ಸಿರಿ ವಿಜಯ ವಿಠ್ಠಲನ ಚರಣ ಭಜಿಪ ಗುರುವೆ || ೩

## ಮಂತ್ರಾಲಯನಿವಾಸ

ರಾಗ--ಕಾಂಬೋಧಿ [ ಭೀಮಪಲಾಸ ]  ಆದಿತಾಳ [ ತೀನ್‌ತಾಲ ]

ಮಂತ್ರಾಲಯನಿವಾಸ ಉತ್ತಮ ಹಂಸ |
ಸಂತಾಪ ಪರಿಹರಿಸಿ ಕೊಡು ಎನಗೆ ಲೇಸ || ಪ ||

ಯತಿಗಳ ಶಿರೋರನ್ನ ಯೋಗಸಂಪನ್ನ |
ಕ್ಷಿತಿಯೊಳಗೆ ನಿನಗೆ ಸರಿಗಾಣೆನೊ ||
ನುತಿಸುವೆ ಭಕ್ತಿಯಲಿ ಬಿಡದೆ |
ಮುಕುತಿಯಲಿ ಸತತಾನಂದದಲಿಪ್ಪ || ೧ ||

ಕಪಿಲತೀರ್ಥದಲ್ಲಿ ಕರಣಶುದ್ಧಿಯಲ್ಲಿ ।
ತಪವ ಮಾಡುವ ಜ್ಞಾನಿ ಸೌಮ್ಯಜ್ಞಾನಿ ॥
ಜಪಶೀಲ ಗುಣಗಣಾಂಬುಧಿ ಪುಣ್ಯದ ಬುದ್ಧಿ ।
ಕೃಪೆಮಾಡಿ ಕೊಡು ಗುರುವೆ ಶಿಷ್ಯಸುರತರುವೆ ॥ ೨ ॥

ತಮೋಗುಣ ಕಾರ್ಯ ಪೋಗಲಾಡು ವ್ಯಾಪ್ತಿಯಾ ।
ಶಮೆದಮೆಯುಳಿ ಉಳ್ಳ ಮಹಿಮೆಯಾ ॥
ನಮಗೆ ಪೇಳುವ ವೇದಬಲ್ಲ ವಿನೋದ ।
ಸುಮನ ಸುಗುಣವ ಮೆಚ್ಚಿ ದುರ್ಮತಕೆ ಕಿಚ್ಚಿ ॥ ೩ ॥

ಕಾಶಿ ಸೇತುವೆ ಮಧ್ಯೆ ಮೆರೆವೇ ಜನರಲ್ಲಿ ।
ಭೇದವಿದ್ಯ ಸಜ್ಜನಕೆ ತಿಳಿಸು ಮನಸು ನಿಲ್ಲಿಪೆ ॥
ಪೋಷಿಸುವೆ ಅಪರ ಅಟ್ಟುವ ಮಹದುರ- ।
ದೋಷವ ಕಳೆವಂಥ ವಿಮಲ ಶಾಂತ ॥ ೪ ॥

ವರಹಜ ತೀರದಲ್ಲಿದ್ದ ಸುಪ್ರಸಿದ್ಧ ।
ಮರುತ ಮತಾಂಬುಧಿಸೋಮ ನಿಸ್ಸೀಮ ॥
ಸರಸಿಜಾಪತಿ ನಮ್ಮ ವಿಜಯವಿಠ್ಠಲನಂಘ್ರಿ ।
ಸ್ಮರಿಸುವ ಸುಧೀಂದ್ರಸುತ ರಾಘವೇಂದ್ರ ॥ ೫ ॥

## ಎಲೆ ಮನಮುರಾರಿಯನು ಕೊಂಡಾಡು

ರಾಗ--ಪೂರ್ವಕಲ್ಯಾಣಿ [ ಕಾಫಿ ] ಆದಿತಾಳ [ ತೀನ್ ತಾಲ ]

ಎಲೆ ಮನ ಮುರಾರಿಯನೆ ಕೊಂಡಾಡು ॥ ಪ ॥

ಸಾಧನಕಿದು ಉಪಾಯ ನೋಡು ॥ ಅ. ಪ ॥

ಕಾಲನ ದೂತರ ಕಾಲಿಗೆ ಬಿದ್ದರೆ |
ನಾಳೆಗೆ ನಿಲುವರೆ ನೋಡು || ೧ ||

ಮಂದಿಯ ಮಾತಿಗೆ ಎಂದೆಂದು ಮರುಗದೆ |
ಮುಂದಿನ ಗತಿ ನೀ ನೋಡು || ೨ ||

ರಾಜೀವಮುಖಿಯರ ಸೋಜಿಗ ಮೆಚ್ಚದೆ |
ವಿಜಯವಿಠಲನ ಪಾಡೊ || ೩ ||

## ವೆಂಕಟಾಚಲನಿಲಯಾ

ರಾಗ—ಧೂಪಾಳಿ ( ಜೋಗಿಯಾ ) ಝಂಪೆತಾಳ ( ಝಪ್ )

ವೆಂಕಟಾಚಲನಿಲಯಾ ಎನ್ನ ಒಡೆಯಾ || ಪ ||

ವೆಂಕಟಾಚಲನಿಲಯಾ ವಿಧಾತೃಸಂತರೊಡೆಯಾ |
ಪಂಕಜಮುಖಿರಮಣ ಪಾವನಚರಣಾ || ಅ. ಪ ||

ಉದಯವಾಗದ ಮುನ್ನ ಉದರಪೋಷಣೆಚಿಂತೆ |
ಅದರಮೇಲೆ ಧಾನ್ಯ ಧನದ ಚಿಂತೆ ||
ಮದನ ಯೌವನದ ಚಿಂತೆ ಮತ್ತೆ ಸತ್ವದ ಚಿಂತೆ |
ಹೃದಯದಲಿ ನಿಮ್ಮ ಚಿಂತೆಯನು ಮಾಡದಲೆ ಕೆಟ್ಟೆ || ೧ ||

ಮಂದಗಮನೆಯರಾಶೆ ಮೇದಿನಿ ಆಳುವ ಆಶೆ |
ನಂದನರ ಆಶೆ ನಾನಾ ಆಶೆಯು ||
ಬಂಧು-ಬಳಗದ ಆಶೆ ಭಾಗ್ಯವುಳ್ಳವನಾಶೆ |
ಒಂದು ದಿನ ನಿಮ್ಮಾಶೆಯನು ಮಾಡದಲೆ ಕೆಟ್ಟೆ || ೨ ||

ಎದುರುಯಿಲ್ಲವೆಂಬೊ ಗರ್ವ ಎದಿಯ ಬಿಗುವಿನ ಗರ್ವ |
ವದನ ನಿಷ್ಠುರ ಗರ್ವ ವಿದ್ಯ ಗರ್ವವು ||
ಉದಧಿಶಯನ ನಮ್ಮ ವಿಜಯವಿಠ್ಠಲರೇಯಾ |
ಮದ ಗರ್ವದಿಂದ ನಿನ್ನ ನೆನಹು ಮಾಡದೆ ಕೆಟ್ಟೆ || ೩ ||

## ಯಾಕೆ ಜೀವನವೆ

ರಾಗ—ದ್ವಿಜಾವಂತಿ ( ಭೂಪ ) ಆದಿತಾಳ ( ದೀಪಚಂದಿ )

ಯಾಕೆ ಜೀವನವೆ ನೀ ಶ್ರೀಕಾಂತನನು ಮರೆವಿ |
ವಿವೇಕವೇ ನಿನಗಿದು ? || ಪ ||

ಶೋಕೆಯಿಂದಲಿ ನಿನ್ನ ಸಾಕುವ ಶ್ರೀಹರಿಯು |
ಬೇಕಾದ ವರವೀವ ಭಕ್ತವತ್ಸಲ ಧೊರೆಯಾ || ಅ. ಪ ||

ಲೇಸಾದರು ವಿಷಯದಾಸೆಯು ಬಿಡಲೊಲ್ಲಿ |
ಏಸು ಜನ್ಮಂಗಳಾದರು ಈ ಶರೀರವು ನಿನ್ನದೆಂದು ತಿಳಿದು ||
ಪೋಷಿಸುವಿಯೊ ಬರಿದೆ ದೋಷರಹಿತ ಶ್ರೀನಿ- |
ವಾಸನ್ನ ನೆನೆದು ನಿರ್ದೋಷವ ಕಳೆದೆನ್ನ ಪೋಷಿಸು
ಎನ್ನದಲೆ || ೧ ||

ಸತಿ-ಸುತರನು ನೀನು ಸಲಹುವೆನೆನುತಲಿ |
ಅತಿ ಚಿಂತೆ ನಿನಗ್ಯಾತಕೊ ಗತಿ ನಿನಗಾಗುವ ||
ಹಿತಚಿಂತನೆ ಮಾಡೊ ಸದ್ಗತಿಯಾಗುವ ತನಕ |
ರತಿಪತಿಪಿತನ ನೆನೆದು ನೀ ಪ್ರತಿಕ್ಷಣ ಹರಿಕಥೆ ಕೇಳದಲೆ || ೨ ||

ಪೊಟ್ಟೆಗೋಸುಗ ಭ್ರಷ್ಟರ ಸ್ತುತಿಸಿ ನೀ |
ಕೆಟ್ಟುಪೋಗುವಿ ಯಾತಕೋ ಜೀವನವೆ ||
ಪುಟ್ಟಿಸಿದವ ನಿನ್ನ ಪೊಟ್ಟೆಗೆ ಕೊಡನೇನೋ |
ಕೆಟ್ಟುಹೋಗದೆ ವಿಜಯವಿಠಲನ್ನ ನೆನೆದು ಸುಖಿಯಾಗು || ೩ ||

## ಇದೇ ಸಮಯ ಹರಿಯೆ

ರಾಗ—ಆರಭಿ ( ದುರ್ಗಾ ) ಆದಿತಾಳ ( ತೀನ್‌ತಾಳ )

ಇದೇ ಸಮಯ ಹರಿಯೆ ಇದೇ ಸಮಯ ‖ ಪ ‖

ನಿನ್ನ ಪದಕಮಲ ತೋರಿ ಸದಾ |
ಬಿಡದೆ ಎನ್ನ ಮುದದಿ ಪೊರೆವುದಕೆ ‖ ಅ. ಪ ‖

ನಾನಾ ಯೋನಿಯಲಿ ಬಂದು ಜ್ಞಾನ ದುರ್ಲಭನಾಗಿ |
ಹೀನನಾದವಗೆ ಸುಜ್ಞಾನ ಪಾಲಿಸುವುದಕೆ ‖ ೧ ‖

ಆಶಾಪಾಶಕೆ ಸಿಲುಕಿ ಶ್ರೀಶನ ಮರೆತೆನೋ |
ಲೇಸು ದಾರಿಯ ತೋರಿ ದಾಸನ ಕಾಯುವುದಕೆ ‖ ೨ ‖

ಸಂತರ ಸಂಗವ ಸಂತತ ಪಾಲಿಸಿ |
ಅಂತರಂಗದಿ ನಿನ್ನ ಚಿಂತನೆ ಕೊಡುವುದಕೆ ‖ ೩ ‖

ಹಿಂದಿನ ಸುಕೃತದಿ ಬಂದೆ ಭೂಸುರನಾಗಿ |
ಮುಂದಿನ ಪದಕ್ಕಾಗಿ ಕುಂದದೆ ಸಲಹುವುದಕೆ ‖ ೪ ‖

ಶ್ರೀಪತಿ ವಿಜಯವಿಠ್ಠಲ ವೆಂಕಟ |
ತಾಪವ ಕಳೆದೆನ್ನ ಕಾಪಾಡುವುದಕೆ ‖ ೫ ‖

## ಹದಿನಾಲ್ಕು ಲೋಕವನಾಳುವ ತಂದೆಗೆ

ರಾಗ—ಸಾವೇರಿ [ ದರ್ಬಾರಿ ಕಾನಡಾ ] ಝಂಪೆತಾಳ [ ಝಪ್ ]

ಹದಿನಾಲ್ಕು ಲೋಕವನಾಳುವ ತಂದೆಗೆ |
ಮುದದಿಂದ ನಾನೊಬ್ಬ ಭಾರವಾದೆನೆ ‖ ಪ ‖

ಸುರಗಿರಿಯು ಶರಧಿಯೊಳು ಕಡೆವಾಗ ಮುಣಗಲಾ |
ಭರದಿಂದ ಪೋಗಿ ಬೆನ್ನಾಂತು ಪೊತ್ತೆ ||
ಧರಣಿಯು ಮೊರೆಯಿಡಲು ತೆರಳಲ್ಲಿ ಬಂದು |
ಭೂತರುಣಿಯನು ಸೆರೆಬಿಡಿಸಿ ಉಳುಹಿಕೊಳ್ಳಲಿಲ್ಲವೆ ||೧||

ಸುರಪತಿ ಮುನಿದೇಳು ಹಗಲಿರುಳು ಮಳೆಗರೆಯೆ |
ಬೆರಳಲಿ ಧರಿಸಿ ತುರುಗಳ ಕಾಯ್ದ್ವ ನಿಜದೆ ||
ವರಮುನಿ ಪಸವನು ಬೇಡಲಾಗಿ ಬೆದರಿ ನರಂ |
ನರಸಿ ನಿನ್ನ ಕರೆಯೆ ಕರುಣದಲಿ ಪಾಲಿಸಿದೆ ||೨||

ಜಲಜಾಕ್ಷ ಬೆಟ್ಟವನು ಪೊತ್ತು ಬಳಲಿದಾಗ |
ಸಲಹಬೇಕೆಂದು ಬೇಸರಿಸಲಿಲ್ಲಾ ||
ಸುಲಭದಲಿ ಶೇಷಾಚಲನಾಗಿಪ್ಪ |
ಒಲಿದೆನ್ನ ಸಂರಕ್ಷಿಸೊ ವಿಜಯವಿಠ್ಠಲನೆ ||೩||

## ದೂರ ನೋಡುವರೆ ರಂಗಯ್ಯ

ರಾಗ—ಕಲ್ಯಾಣಿ ( ಮೂಲಕಂಸ ) ಆದಿತಾಳ ( ಝಂಪ್ )

ದೂರ ನೋಡುವರೆ ರಂಗಯ್ಯ ಎನ್ನ | ದೂರ ನೋಡುವರೆ ||ಪ||

ದೂರ ನೋಡುವರೇನೊ ಸಂಸಾರಶರಧಿಯೊಳಗೆ ಮುಳುಗಿ |
ದಾರಿಗಾಣದೆ ನೀನೆ ಗತಿ ಮುರಾರಿಯೆಂದು ಸಾರಿದಮೇಲೆ ||ಅ. ಪ||

ಆಶೆಬಿಡದೆಲೊ ಕಾಸುವೀಸಕೆ ಕ್ಲೇಶ ಘನವೇನೋ
ಈಶ ಯಾರಿಗೆ ಪೇಳಲಳವೆಲೋ ದೇವನೆ ||

ಶ್ರೀಶ ಎನ್ನ ಮನಸಿನಲ್ಲಿ ಲೇಶವಾದರು ಭಕುತಿಯಿಲ್ಲ |
ಪಾಶಬದ್ಧನಾಗಿ ಬಹುದೋಷಿಯಾದೆನೊ ದಾಶರಥೆ || ೧ ||

ಭಕುತಿಯಿಲ್ಲವೊ ಅದರ ಹೊರತು ಮುಕುತಿಯಿಲ್ಲವೊ |
ಯುಕುತಿಯಿಂದಲಿ ಮೌನವಲ್ಲವೋ ಮುಕುತಿದಾ- |
ಯಕ ನಿನ್ನಗಾಣದೆ ಭಕುತಿಗೋಸುಗ ಪರರ ತುತಿಸಿ |
ಕಕುಲಾತಿಯಿಂದಲೆನ್ನ ಶಕುತಿ ಎಲ್ಲ ನಷ್ಟವಾಯಿತು || ೨ ||

ಪೊರೆಯದಿರುವರೆ, ಕರುಣಾಳು ಎಂಬ ಬಿರುದು ಬಿಡುವರೆ |
ಹರಿಯೆ ಎನ್ನ ಮರೆತುಬಿಡುವರೆ ಕರಿಯು ||
ಹರಿಯೆ ಎಂದು ಕರೆಯೆ ಸಿರಿಗೆ ಹೇಳದೆ ಭರದಿ ಪೊರೆದೆ ಎಂಬ |
ವಾರುತಿ ಕೇಳಿ ಮೊರೆಯಹೊಕ್ಕೆನು ವಿಜಯವಿಠ್ಠಲ || ೩ ||

## ಇರಬಾರದೊ ಬಡವ ಜಗತ್ತಿನೊಳಗೆ

ರಾಗ—ಶಂಕರಾಭರಣ ( ಭೈರವ ) ಅಟತಾಳ ( ದೀಪಚಂದಿ )

ಇರಬಾರದೊ ಬಡವ ಜಗತ್ತಿನೊಳಗೆ |
ಪರದೇಶಿ ಮಾನವಗೆ ದಿಕ್ಕು ಮತ್ತಾವನು || ಪ ||

ಪೊಡವಿಪತಿ ದೃಷ್ಟಿಗಳು ಒಳ್ಳೆಯವಲ್ಲಾ ಎಂದು |
ಬಿಡದೆ ಜನ ಪೇಳುವದು ಸಿದ್ಧವಯ್ಯಾ ||
ಬಡವನಾನಯ್ಯ ನಾನಾ ಕಷ್ಟಪಟ್ಟಿರಡು |
ಒಡವೆ ಸಂಪಾದಿಸಲು ಅಪಹರಿಸಿದ ನೋಡು || ೧ ||

ದಿನ ಪ್ರತಿದಿನದಲ್ಲಿ ಕರಳು ಕಟ್ಟಿಕೊಂಡು |
ಹಣದಾಸೆಯಿಂದ ನಾ ಗಳಿಸಿದ್ದೆನೊ ||

ಮನೆ ಬರಿದು ಮಾಡಿಕೊಂಡೊಯ್ದಿಯಾ ಧರ್ಮವೇ |
ವನಜನಾಭನೆ ನಿನ್ನ ಧೊರೆತನಕೆ ಶರಣೆಂಬೆ || ೨ ||

ಧೊರೆಗಳಾ ಲಕ್ಷಣವಿದೆ ಎಂದೆಂದಿಗೆ ತಮಗೆ |
ಸರಿ ಬಂದ ಕಾರ್ಯ ಮಾಡುವರಲ್ಲದೇ ||
ನೆರೆಯುವರದೇ ತಪ್ಪು ವಿಜಯವಿಠ್ಠಲರೇಯ |
ಮರಳಿ ಮಾತಾಡಿದರೆ ಅಪರಾಧ ಹೊರಿಸುವರು || ೩ ||

## ಅಂತರಂಗದ ಕದವು ತೆರೆಯಿತಿಂದು

ರಾಗ—ಬ್ಯಾಗಡೆ ( ಜೀವನಪುರಿ ) ಝಂಪೆತಾಳ ( ಝಪ್ )

ಅಂತರಂಗದ ಕದವು ತೆರೆಯಿತಿಂದು || ಪ ||

ಎಂತು ಪುಣ್ಯದ ಫಲವು ಪ್ರಾಪ್ತಿ ದೊರಕಿತೊ
ಎನಗೆ || ಅ. ಪ ||

ಏಸುದಿನವಾಯಿತೊ ಬೀಗಮುದ್ರೆಯ ಮಾಡಿ |
ವಾಸವಾಗಿದ್ದರೋ ದುರುಳರಿಲ್ಲಿ ||
ಮೋಸವಾಯಿತು ಇಂದಿನ ತನಕ ತಮಸಿನ |
ರಾಶಿಯೊಳಗೆ ಹೂಳಿ ಕಾಣಿಸುತ್ತಿರಲಿಲ್ಲ || ೧ ||

ಹರಿಕರುಣವೆಂಬಂಥ ಕೀಲಿ ಕೈ ದೊರಕಿತು |
ಗುರುಕರುಣವೆಂಬಂಥ ಶಕ್ತಿಯಿಂದ ||
ಪರಮ ಭಾಗವತರ ಸಹವಾಸದಲಿ ಪೋಗಿ |
ಹರಿಸ್ಮರಣೆಯಿಂದಲ್ಲಿ ಬೀಗಮುದ್ರೆಯ ತೆಗೆದೆ || ೨ ||

ಸುತ್ತಲಿದ್ದವರೆಲ್ಲ ಪಲಾಯನವಾದರು |
ಭಕ್ತಿಕಕ್ಕಡವೆಂಬ ಜ್ಞಾನದೀಪ ||

ಜತ್ತಾಗಿ ಹಿಡಕೊಂಡು ದ್ವಾರದೊಳಗೆ ಪೊಕ್ಕೆ |
ಎತ್ತನೋಡಿದರತ್ತ ಶೃಂಗಾರಸದನ || ೩ ||

ಹೊರಗೆ ದ್ವಾರವು ನಾಲ್ಕು ಒಳಗೈದು ದ್ವಾರಗಳು |
ಪರ ದಾರಿಗೆ ಪ್ರಾಣ ಜಯವಿಜಯರು ||
ಮಿರುಗುವೊ ಮಧ್ಯಮಂಟಪ ಕೋಟಿರವಿಯಂತೆ |
ಸರಸಿಜನಾಭನ ಅರಮನೆಯ ಸೊಬಗು || ४ ||

ಸ್ವಮೂರ್ತಿಗಣ ಮಧ್ಯ ಸಚ್ಚಿದಾನಂದೈಕ |
ರಮೆ ಧರೆಯರಿಂದಲಾಲಿಂಗಿತ್ವದಿ ||
ಕಮಲಜಾದಿಗಳಿಂದ ತುತಿಸಿಕೊಳ್ಳುತ ಹೃದಯ- |
ಕಮಲದೊಳಗಿರುವ ಶ್ರೀವಿಜಯವಿಠಲನ ಕಂಡೆ || ೫ ||

## ಹಿಗ್ಗದಿರು–ಹಿಗ್ಗದಿರು ಮನುಜಪಶುವೆ

ರ– ಕಾಂಬೋದಿ [ ದುರ್ಗಾ ] ಝಂಪೆತಾಳ [ ಝಂಪ್ ]

ಹಿಗ್ಗದಿರು ಹಿಗ್ಗದಿರು ಮನುಜಪಶುವೆ |
ಮುಗ್ಗಿ ತಗ್ಗುವದು ಮುಂದರಿಯದಲೆ ಮರುಳಾಹೆ || ಪ ||

ಆಯುದಲಿ ದ್ರೋಣಸುತ ಕೃಪ ವಿಭೀಷಣನೇನೋ |
ಶ್ರೇಯದಲಿ ದಶರಥ ನಹುಷನೇನೋ ||
ಈಯುವದಕೆ ಮಯೂರಧ್ವಜ ಶಿಬಿ ಬಲಿಯೇನೊ |
ಮಾಯಾ ಬಿಡುವಲ್ಲಿ ಜಡಭರತ ನೀನೇನೊ || ೧ ||

ಶೂರತ್ವದಲಿ ಭೀಷ್ಮ ಅಭಿಮನ್ಯು ನೀನೇನೊ |
ಘೋರ ತಪಸಿನಲಿ ವಿಶ್ವಾಮಿತ್ರನೇನೊ ||

ವಿರಕುತಿಯಲಿ ಸುರಸೈನ್ಯನಾಯಕನೇನೊ |
ಹಾರುವ ಬಿಂಕದಲಿ ಗರುಡ ನೀನೇನೊ ||೨||

ಬಲದಲ್ಲಿ ಬಲರಾಮ ಶಲ್ಯ ಕೀಚಕನೇನೊ |
ತಿಳಿವಳಿಕೆಯಲಿ ವಿದುರ ಸಂಜಯನೇನೊ ||
ಒಲಿದು ಪಾಡುವಲ್ಲಿ ನಾರದ ತುಂಬುರನೇನೊ |
ಛಲ ಮಾಡುವಲ್ಲಿ ಧ್ರುವರಾಯ ನೀನೇನೊ ||೩||

ಭಕುತಿಯಲಿ ಪ್ರಹ್ಲಾದ ಪುಂಡರೀಕನೇನೊ |
ಭುಕುತಿಯಲಿ ಅಗಸ್ತ್ಯ ಬಕ ನೀನೇನೊ |
ಉಕುತಿಯಲಿ ಸೂತ ಸಹದೇವ ಶೌನಕನೇನೊ |
ಶಕುತಿಯಲಿ ವಾಲಿ ಯಮರಾಯ ನೀನೇನೊ ||೪||

ಯೋಗದಲಿ ಶುಕ ಜನಕ ಸನಕಾದಿಗಳೇನೊ |
ತ್ಯಾಗ ಮಾಡುವಲ್ಲಿ ಕರ್ಣ ನೀನೇನೊ ||
ಭೋಗಪಡುವಲ್ಲಿ ಮಹಾಭಾಗ ಇಂದ್ರನೇನೊ |
ವೇಗದಲಿ ಪುರುಷಮೃಗನು ನೀನೇನೊ ||೫||

ಸಖತನ ಮಾಡುವಲ್ಲಿ ಶ್ವೇತವಾಹನನೇನೊ |
ನಿಖಿಳ ಕಥೆ ಕೇಳುವಲ್ಲಿ ಪರೀಕ್ಷಿತನೇನೊ ||
ಅಖಿಳರನು ಗೆಲುವಲ್ಲಿ ಕಾರ್ತವೀರ್ಯನೇನೊ |
ಸುಖದಲ್ಲಿ ಇಪ್ಪುದಕೆ ಪವನ ನೀನೇನೊ ||೬||

ವಿತ್ತದಲಿ ನೀನು ವೈಶ್ರವಣನೇನೊ |
ಮತ್ತೆ ಕ್ಷಮೆಯಲಿ ಹರಿಶ್ಚಂದ್ರನೇನೊ ||
ಭೃತ್ಯತನ ಪಡೆವಲ್ಲಿ ಅಕ್ರೂರ ನೀನೇನೊ |
ಸುತ್ತುವಲಿ ಪ್ರಿಯವ್ರತರಾಯನೇನೊ ||೭||

ವ್ರತದಲ್ಲಿ ಅಂಬರೀಷ ರುಕುಮಾಂಗದನೇನೊ |
ಸ್ತುತಿಯಲ್ಲಿ ಮುಚಕುಂದರಾಯನೇನೊ ||
ಅತಿ ಚೆಲುವತನದಲ್ಲಿ ಮನ್ಮಥ ನಕುಲನೇನೊ |
ಕ್ರತು ಮಾಡುವಲ್ಲಿ ಧರ್ಮಪುತ್ರ ನೀನೇನೊ || ೮ ||

ಶಾಪಗಳ ಕೊಡುವಲ್ಲಿ ಬ್ರಹ್ಮಪುತ್ರನೇನೊ |
ತಾಪ ತೋರುವಲ್ಲಿ ರವಿ ಅನಳನೇನೊ ||
ಕೋಪ ಮಾಡುವಲ್ಲಿ ಗಿರಿಜಾರಮಣನೇನೊ |
ತಾಪಸರ ನಡುವೆ ವಸಿಷ್ಠ ನೀನೇನೊ || ೯ ||

ಉನ್ನತದಲಿ ನೀನು ಮೇರುಪರ್ವತನೇನೊ |
ಘನ್ನ ಮದದಲಿ ಧೃತರಾಷ್ಟ್ರನೇನೊ ||
ಇನ್ನು ಮತಿಯನ್ನು ಕೊಡುವಲಿ ಗಜಮೊಗನೇನೊ |
ಮುನ್ನೆ ಕವನದಲ್ಲಿ ಶುಕ್ರದೇವನೇನೊ || ೧೦ ||

ಹಮ್ಮಿನಲಿ ಬಾಳದಿರು ಹಿತವಾಗದೊ ನಿನಗೆ |
ಆ ಮಹಿಮರ ಸರಿ ನೀನಲ್ಲವೊ ||
ಸುಮನಸರೊಡೆಯ ಸಿರಿ ವಿಜಯವಿಠ್ಠಲರೇಯನ್ನ |
ನೆಮ್ಮಬೇಕಾದರೆ ಸೋಹಂ ನಿರಾಕರಿಸು || ೧೧ ||

## ಯಾಕೆ ಬಂದಿ ಜೀವಾ ಯಾಕೆ ಬಂದಿ

ರಾಗ—ಮಾರವಿ ( ತಿಲಕಕಾಮೋದ ) ಆಟತಾಳ ( ತೀನ್ ತಾಲ )

ಯಾಕೆ ಬಂದಿ ಜೀವಾ ಯಾಕೆ ಬಂದಿ |
ಲೋಕದ ಸವಿಸುಖ ಅನುಭವವಾಯಿತು || ಪ ||

ಮೇರುಪರ್ವತದಲ್ಲಿ ವಾರಣವಂತನಾಗಿ ।
ಶ್ರೀರಮಣನ ಧ್ಯಾನ ಆರಾಧನೆಯ ಬಿಟ್ಟು ॥ ೧ ॥

ಉಡಿಗೆ-ತೊಡಿಗೆ ಇಟ್ಟು ಅಡಿಗಡಿಗೆ ಸುಖ ।
ಬಡುವೆನೆಂಬುದಕೆ ಈ ಪಾಡುಒಡಲು ನೋಡು ॥ ೨ ॥

ಉಣ್ಣು ಉಣ್ಣು ಉಣ್ಣು ಮತ್ತೆ ಉಣ್ಣು ।
ಹೆಣ್ಣು-ಹೊನ್ನು-ಮಣ್ಣು ನಿನ್ನಾಧೀನವೆಂಬಿ ॥ ೩ ॥

ಅಲ್ಲಿಗಲ್ಲಿಗೆ ಜ್ಞಾನ ಬಲ್ಲವರ ಕೂಡ ।
ಎಲ್ಲ ಕಾಲದಲಿ ನಲಿದಾಡೋದು ಬಿಟ್ಟು ॥ ೪ ॥

ಆದದ್ದಾಯಿತು ಹೋದ ಮಾತುಗಳೇಕೆ ।
ಶ್ರೀಧರ ವಿಜಯವಿಠ್ಠಲನ ಮರೆಯದಿರು ॥ ೫ ॥

## ಎಚ್ಚತ್ತು ಇರು ಕಂಡ್ಯ ಮನವೆ

ರಾಗ—ಸಾವೇರಿ ( ದೇಸ್ ) ಅಟತಾಳ ( ದೀಪಚಂದಿ )

ಎಚ್ಚತ್ತು ಇರು ಕಂಡ್ಯ ಮನವೆ । ನಮ್ಮ ।
ಅಚ್ಯುತನಂಘ್ರಿಗಳನು ನೆನೆ ಕಂಡ್ಯ ಮನವೆ ॥ ಪ ॥

ಆಡದಿರಪವಾದಗಳನು ಕೊಂ- ।
ಡಾಡದಿರಿನ್ನು ಚಿಲ್ಲರೆ ದೈವತಗಳನು ॥
ಬೇಡದಿರುಭಯ ಸೌಖ್ಯವನು ನೀ ।
ಮಾಡದಿರಿನ್ನು ದುರ್ಜನ ಸೇವೆಯನು ॥ ಸಜ್ಜನ-
ದ್ವೇಷವನು ॥ ೧ ॥

ನರಜನ್ಮ ಬರುವದೆ ಕಷ್ಟ ಇದ- ।
ನರಿದು ನೋಡು ವಿಪ್ರಾದಿ ಶ್ರೇಷ್ಠ ॥

ಮರಳಿಬಾಹುದು ಉತ್ಕೃಷ್ಟ |
ಮರುತ ಮತವ ಪೊಂದುವದು ದುರ್ಘಟ || ಕೇಳಿಲ್ಪೊ
ಮರ್ಕಟ || ೨ ||

ಹಾಳುಹರಟೆಗೆ ಹೋಗಬೇಡ ನೀ ಕಂಡ |
ಕೂಳನು ತಿಂದು ಒಡಲ್ಹೊರಿಯಬೇಡ ||
ಕಾಲ ವ್ಯರ್ಥ ಕಳಿಯಬೇಡ ನಮ್ಮ |
ಪ್ರಾರಬ್ಧ ಭೋಗಕ್ಕೆ ಮನ ಸೋಲಬೇಡ ||
ಶ್ರೀಹರಿ ದಯಮಾಡ || ೩ ||

ಅನ್ಯಸ್ತ್ರೀಯರ ನೋಡಬೇಡಾ ಹಿಂದೆ |
ಮಣ್ಣು ಕೂಡಿದವರ ನೀ ನೋಡಾ ||
ಅನ್ಯ ಶಾಸ್ತ್ರವನೋದಬೇಡಾ ನಮ್ಮ |
ಪೂರ್ಣಪ್ರಜ್ಞರ ಬೋಧ ತಿಳಿದುಕೊ ಗಾಢಾ ||
ಮೈಮರೆತಿರಬೇಡಾ || ೪ ||

ಗೋ- ವಿಪ್ರರ ಸೇವೆ ಮಾಡು, ಸೋಹಂ |
ಭಾವಗಳನು ಬಿಟ್ಟು ದಾಸತ್ವ ಕೂಡು ||
ಕೇವಲ ವೈರಾಗ್ಯ ಮಾಡು ಎಂಟು |
ರೂಪಗಳಲ್ಲಿ ಶ್ರೀಹರಿಯ ಕೂಡ್ಯಾಡೊ ||
ಲಜ್ಜೆಯನ ಈಡ್ಯಾಡೊ || ೫

ನಾನು ಎಂಬುದು ಬಿಡು ಕಂಡ್ಯ ಎನ್ನ |
ಮಾನಾಪಮಾನಕ್ಕೆ ಹರಿಯೆನ್ನು ಕಂಡ್ಯ ||
ಜ್ಞಾನಿಗಳ ಒಳಗಾಡು ಕಂಡ್ಯ ವಿಷಯ |
ಜೇನೆಂದು ಮೆದ್ದರೆ ಅದು ವಿಷ ಕಂಡ್ಯಾ ||
ಬೀಳುವಿ ಯಮಗೊಂಡಾ || ೬

ಕಷ್ಟಪಡದೆ ಸುಖ ಬರದು ಕಂ- |
ಗೆಟ್ಟ ಮೇಲಿನ್ನು ಕಷ್ಟ ತಿಳಿಯೋದು ||
ದುಷ್ಟ ವಿಷಯ ಆಶೆ ಜರಿದು ವಿಜಯ- |
ವಿಠ್ಠಲರಾಯನ ಹೊರತು ಮುಕ್ತಿ ಬಾರದು ||
ಕೂಗೆಲವೊ ಬಾಯ ತೆರೆದು || ೭ ||

## ಮನವೆ ಮಾಧವನೊಳು ಮಮತೆಯಿರಲಿ

ರಾಗ—ಶಂಕರಾಭರಣ ( ತೋಡಿ ) ಆದಿತಾಳ ( ಧುಮಾಳಿ )

ಮನವೆ ಮಾಧವನೊಳು ಮಮತೆಯಿರಲಿ || ಪ ||

ತನುಮನಧನಗಳ ತನಗೆ ನೀಡಿದವ್ಯಾಲೆ |
ಮನಸಿಜ ಜನಕನು ಅನುದಿನ ಪೊರೆವ || ಅ. ಪ ||

ಕಾಮಜನಕನ ಪ್ರೇಮದಿ ನೆನೆದರೆ |
ಮಾಮನೋಹರ ತನ್ನ ಧಾಮವ ಕೊಡುವ || ೧ ||

ಸಂತತ ಆತನ ಚಿಂತಿಸುತ್ತ- |
ನಂತ ಮಂಗಳ ಮತಿಹೊಂದು ಮನವೆ || ೨ ||

ಅಜಭವನುತ ವಿಜಯಸಖನ ಯಜಿಸುವ ಜನರಿಗೆ |
ನಿಜ ಪದವನೆ ಕೊಡುವ ವಿಜಯವಿಠ್ಠಲನು || ೩ ||

## ಯಾಕೆ ಪುಟ್ಟಿಸಿದಿ ಇನ್ನು

ರಾಗ—ಕೇದಾರಗೌಳ ( ಜೋಗಿಯಾ ) ಝಂಪೆತಾಳ ( ಝಪ್ )

ಯಾಕೆ ಪುಟ್ಟಿಸಿದಿ ಇನ್ನು ಎಲೊ ಹರಿಯೆ |
ಲೋಕದೊಳಗನುಗಾಲ ತಿರಿದು ತಿಂಬುವಂತೆ ಮಾಡಿ || ಪ ||

ಒಡಲಿಗಾಗಿ ಒಬ್ಬನ ಸಂಗಡ ಹೋಗಲು |
ಕೊಡುವವನು ಇಲ್ಲೆಂದು ಪರಿಹರಿಸುವ ||
ಸುಡು ಈ ಶರೀರವ ಬಳಲಲಾರೆನೊ ವಿಷದ |
ಮಡುವನಾದರು ಧುಮುಕಿ ಮರಣವಾಗುವೆ ರಂಗಾ || ೧ ||

ಪ್ರತಿದಿನವು ಅನ್ನ ಕೊಡುವವನ ಬಾಗಿಲಿಗ್ಹೋಗೆ |
ಹುತವಾಗುವನು ಎನ್ನ ನೋಡುತಲಿ ||
ಕ್ಷಿತಿಯೊಳಗೆ ಈ ಪರಿ ಬದುಕಿ ಇಹೋದಕಿಂತ |
ಹತವಾಗಬಹುದಂಬಿನ ಮೊನೆಗೆ ಬಿದ್ದು ರಂಗಾ || ೨ ||

ಎಲ್ಲಿ ಬೇಡಿದರಿಲ್ಲವೆಂಬೋ ಸೊಲ್ಲಿಲ್ಲಿದೆ |
ಒಲ್ಲೆನೋ ಸಾಕು ಈ ನರಜನ್ಮವು ||
ಬಲ್ಲಿದ ಬಲ್ಲಿದರರಸ ಸಿರಿ ವಿಜಯವಿಠ್ಠಲ ನಿ- |
ನ್ನಲ್ಲಿ ದೂತರ ಸಂಗದಲ್ಲಿ ಸುಖಬಡಿಸೊ || ೩ ||

## ಮನಸು ನಿಲಿಸುವದು ಬಹಳ ಕಷ್ಟ

ರಾಗ—ಕೇದಾರಗೌಳ ( ಧೂಪ ) ಝಂಪೆ ತಾಳ ( ದೀಪಚಂದಿ )

ಮನಸು ನಿಲಿಸುವದು ಬಹಳ ಕಷ್ಟ || ಪ ||

ಗುಣಿಸುವುದು ನಿಮ್ಮೊಳಗೆ ನೀವೆ ನೆಲೆ ಬಲ್ಲವರು || ಅ. ಪ ||

ಮುರಿದೋಡಿ ಬರುವ ರಣರಂಗ ನಿಲ್ಲಿಸಬಹುದು |
ಹರಿಯುತಿಹ ನದಿಗಳನು ತಿರುಗಿಸಲಿಬಹುದು ||
ಕರಿ ಸೊಕ್ಕಿ ಬರುತಿರಲು ತಡೆದು ನಿಲ್ಲಿಸಬಹುದು |
ದುರುಳಮನ ನಿಲಿಸುವದು ಸುರರಿಗಳವಲ್ಲ || ೧ ||

ಭೈರವನ ದಾಡೆಯನು ಹಿಡಿದು ನಿಲ್ಲಿಸಬಹುದು |
ಮಾರುತನ ಉರುಬೆಯನು ನಿಲ್ಲಿಸಲಿಬಹುದು ||
ಮಾರಿಗಳ ಮುಂಜೆರಗ ತುಡುಕಿ ನಿಲ್ಲಿಸಬಹುದು |
ಹಾರಿ ಹಾರುವ ಮನಸು ನಿಲಿಸಲಳವಲ್ಲ || ೨ ||

ಶರಧಿಗಳ ಭೋರ್ಗರೆವ ಧ್ವನಿಯ ನಿಲ್ಲಿಸಬಹುದು |
ಸುರಿವ ಬಿರುಮಳೆಯನು ನಿಲ್ಲಿಸಲಿಬಹುದು ||
ಹರಿದೋಡುವ ಮನಸು ನಿಲಿಸಲಾರಳವಲ್ಲ |
ಸಿರಿಯರಸ ವಿಜಯವಿಠ್ಠಲ ತಾನೆ ಬಲ್ಲ || ೩ ||

## ನಿನ್ನ ಮರೆದೆನೊ ರಂಗ

ರಾಗ—ತೋಡಿ ( ಭೈರವಿ ) ಝಂಪೆತಾಳ ( ಝಪ್ )

ನಿನ್ನ ಮರೆದೆನೊ ರಂಗ ನಿನ್ನ ಮರೆದೆನೊ |
ಅನ್ನರನ್ನಕೆ ಸಿಲುಕಿ ಅನುಗಾಲ ಮರುಳಾಗಿ || ಪ ||

ಊಟಕ್ಕೆ ಬರಪೇಳಿ ತನುವುಬ್ಬಿ ಎನ್ನ ಮನ |
ನಾಟುವದು ಅವರ ಕಡೆ ರಾಗದಲ್ಲಿ ||
ನೀಟಾದ ಭೋಜನವ ಬಯುಸುವೆನು ಯಮರಾಯ |
ಪಾಡು ಬಡಿಸುವ ಭಂಗ ಕೇಳಿ ಎಚ್ಚರಿಯದಲೆ || ೧ ||

ಮತ್ತೆ ಕರೆಬರಲು ಉತ್ಸಹ ಪಿಡಿಯಲೊಶವೆ |
ಹೊತ್ತು ಹೊತ್ತಿಗೆ ಪರರ ಕೊಂಡಾಡುತಾ ||

ಹೆತ್ತವರಿಗಿಂದಧಿಕವೆಂದು ನಮಸ್ಕರಿಸುವೆ |
ಚಿತ್ತಜಜನಕ ನಿನ್ನ ಸ್ಮರಣೆ ಮಾಡದಲೆ || ೨ ||

ಎಡೆಯು ಮುಂದೆ ಕುಳಿತು ಎಲ್ಲ ಕಾಲದಲಿಂದ |
ಬಿಡದೆ ಮಾಡಿದ ಪುಣ್ಯ-ಪಾಪಗಳಳಿದು ||
ಎಡ-ಬಲದವರ ಪಂಕ್ತಿ ನೋಡಿ ಕೇಳುತಲಿ ದುಃಖ |
ಬಡುವೆನೋ ಎನಗಿಷ್ಟು ಕೊರತೆ ಹಾಕಿದರೆಂದು || ೩ ||

ಒಬ್ಬರಿಡೆ ನೋಡಲಧಿಕವಾಗಿದ್ದರೆ ನಾನು |
ಉಬ್ಬುವೆನೊ ಊರುಕೇರಿ ಪಿಡಿಯದಂತೆ ||
ಸುಬ್ಬನಸೂರೆಯಂತೆ ಪರವೋದನವನುಂಡು |
ಮಬ್ಬಿನಲಿ ದಿನಗಳೆದೆ ದೀನಮಾನವನಾಗಿ || ೪ ||

ಅನ್ನವಿತ್ತವನ ಪಾಪಗಳು ನಿರಂತರ |
ಅನ್ನದಾಶ್ರಯ ಮಾಡಿಕೊಂಡಿಪ್ಪವೋ ||
ಚೆನ್ನಾಗಿ ತಿಳಿಯದಲೆ ಚತುರತನದಿಂದಲಿ |
ಧನ್ಯನಾನೆಂದು ಬಲು ಪಾಪಗಳ ಭುಂಜಿಸುವೆ || ೫ ||

ಒಡಲಿಗೆ ಬಿದ್ದ ರಸ ಮೂರು ಭಾಗವಾಗಿ |
ಕಡೆಗೆ ಪೋಗುವುದೊಂದು ನಿಲುವದೊಂದು ||
ತಡೆಯದೇ ಸಂತಾನ ಪಡೆವದೊಂದೀಪರಿ |
ಕಡಿಗಾನಕೆ ಗಣಿತವಿಲ್ಲ ಪರರಲ್ಲಿ ಉಂಡ ಋಣಕೆ || ೬ ||

ಆವಾವ ಬಗೆ ರುಚಿ ಜಿಹ್ವೆಗೆ ತೋರುವದು |
ಆವಾವ ಬಗೆ ನರಕ ಮೇಲೆ ಉಂಟು ||
ದೇವಮಣಿ ಸರ್ವೇಶ ವಿಜಯವಿಠ್ಠಲನ್ನ |
ಜೀವಕ್ಕೆ ಸುಖವಾಗುವಂತೆ ಮಾರ್ಗವ ಪಿಡಿಸೊ || ೭ ||

## ಮನವೆ ನೀ ದೃಢವಾದರೆ

ರಾಗ—ಸಾವೇರಿ ( ಸಾರಂಗ ) ಅಟತಾಳ ( ದೀಪಚಂದಿ )

ಮನವೆ ನೀ ದೃಢವಾದರೆ ಮನಸಿ- |
ಜನಯ್ಯನ ಚರಣ ಕಾಂಬೆನೊ ನಾನು ॥ ಪ ॥

ಹಂಬಲವನು ಮಾಡದಿದ್ದರೆ ಹರಿ |
ಎಂಬ ನಾಮ-ಪೀಯೂಷ ದೊರಕುವದು ॥ ೧ ॥

ಚಂಚಲವುಳ್ಳವನಾಗದಿದ್ದರೆ ದುಷ್ಟ |
ಪಂಚೇಂದ್ರಿಯುಗಳನು ಸ್ಥಿರವಾಗಿ ನಿಲ್ಲಿಸುವೆ ॥ ೨ ॥

ಅತ್ತಲಿತ್ತಲಿ ಪೋಗದಿರು ಎ- |
ನ್ನತ್ತ ವಿಜಯವಿಠ್ಠಲ ಬರಲೀ ॥ ೩ ॥

## ವಾಸುದೇವನ ನೆನೆದು ನೀ ಸುಖಿಯಾಗು

ರಾಗ—ಉದಯರಾಗ ( ತೋಡಿ ) ಝಂಪೆತಾಳ ( ಝಪ್ )

ವಾಸುದೇವನ ನೆನೆದು ನೀ ಸುಖಿಯಾಗು ಮನವೆ |
ಈ ಶರೀರದ ಭ್ರಾಂತಿ ಇನ್ಯಾಕೆ ಮನವೆ ॥ ಪ ॥

ಕಾಲುಗಳು ಕುಂದಿದವು ಕಣ್ಣುದೃಷ್ಟಿ ಹಿಂಗಿದವು |
ಮೇಲೆ ಯೌವನ ಹೋಗಿ ಮುಪ್ಪಾಯಿತು ॥
ಕಾಲ ಕರ್ಮಂಗಳು ಒದಗಿದಾ ಕ್ಷಣದಲಿ |
ಬೀಳುವ ತನುವಿನಾಶೆ ಇನ್ಯಾತಕೆಲೆ ಮರುಳೆ ॥ ೧ ॥

ಧಾತುಗಳು ಹಿಂಗಿದವು ದಂತಗಳು ಸಡಿಲಿದವು |
ಕಾಂತೆಯರು ನೋಡಿ ವಾಕರಿಸುವರು |

ಭ್ರಾಂತಿ ಇನ್ಯಾಕೆ ಬಯಲಾದ ದೇಹಕ್ಕೆ ಇನ್ನು |
ಅಂತರ ಮಾಡದೆ ಹರಿಯ ನೆನೆ ಮನವೆ || ೨ ||

ನೀರ ಬೊಬ್ಬುಳಿಯಂತೆ ನಿಜವಲ್ಲ ದೇಹ |
ಧಾರಣಿಯನು ಮೆಚ್ಚಿ ಮರುಳಾಗಿ ಕೆಡದೆ ||
ಶ್ರೀರಮಣ ವಿಜಯವಿಠ್ಠಲರಾಯ |
ಸೋರಿ ಹೋಗುತಿದೆ ಸ್ವರ್ಗ ಸುಮ್ಮನಿರಬೇಡಾ || ೩ ||

## ಭಕುತಿ ಸುಖವೊ ರಂಗ ಮುಕುತಿ ಸುಖವೊ

ರಾಗ—ಪೂರ್ವಕಲ್ಯಾಣಿ ( ಭೂಪ ) ಅಟತಾಳ ( ದೀಪಚಂದಿ )

ಭಕುತಿ ಸುಖವೊ ರಂಗ ಮುಕುತಿ ಸುಖವೊ || ಪ ||
ಭಕುತಿ ಸುಖವೊ ಮುಕುತಿ ಸುಖವೊ |
ಯುಕುತಿವಂತರೆಲ್ಲ ಹೇಳಿ || ಅ. ಪ ||

ಭಕುತಿ ಮಾಡಿದ ಪ್ರಹ್ಲಾದ |
ಮುಕುತಿಯನ್ನು ಪಡೆದುಕೊಂಡ ||
ಮುಕುತಿ ಬೇಡಿದ ಧ್ರುವರಾಯ |
ಯುಕುತಿಯಿಂದ ಹರಿಯ ಕಂಡ || ೧ ||

ಭಕುತಿ ಮಾಡಿದ ಅಜಮಿಳನು |
ಅಂತ್ಯದಲ್ಲಿ ಹರಿಯ ಕಂಡ ||
ಮುಕುತಿ ಬೇಡಿದ ಕರಿರಾಜ |
ದುರಿತಗಳನು ಕಳೆದುಕೊಂಡ || ೨ ||

ಭಕುತಿ ಮುಕುತಿದಾತ ನಮ್ಮ ।
ಲಕುಮಿಯರಸ ವಿಜಯವಿಠಲ ॥
ಶಕುತನೆನುತ ತಿಳಿದು ನಿತ್ಯ ।
ಭಕುತಿಯಿಂದ ಭಜನೆ ಮಾಡಿರೊ ॥ ೩ ॥

## ಹರಿಯ ನೆನೆಸಿದ ದಿವಸ ಶುಭಮಂಗಳಾ

ರಾಗ—ಕಾಂಬೋದಿ ( ಭೈರವಿ ) ಝಂಪೆತಾಳ ( ಝಪ್ )

ಹರಿಯ ನೆನೆಸಿದ ದಿವಸ ಶುಭಮಂಗಳಾ ‖ ಪ ‖

ಹರಿಯ ನೆನೆಸದ ದಿವಸ ಅಪಮಂಗಳಾ ‖ ಅ. ಪ. ‖

ಹರಿಯ ನೆನೆಸಿದ ನಿಮಿಷ ಆವಾಗಲೂ ಹರುಷ |
ಹರಿಯ ನೆನೆಸದ ದಿವಸ ದುರ್ವಾಸನಸಾ ||
ಹರಿಯ ನೆನೆಸಿದ ಘಳಿಗೆ ಮುಕ್ತಿಗೆ ಬೆಳವಣಿಗೆ |
ಹರಿಯ ನೆನೆಸದ ಘಳಿಗೆ ಯಮನ ಬಳಿಗೆ ‖ ೧ ‖

ಹರಿಯ ನೆನೆಸಿದ ಪ್ರಹರ ಕುಲಕೋಟಿ ಉದ್ಧಾರ |
ಹರಿಯ ನೆನೆಸದ ಪ್ರಹರ ಹೀನಾಚಾರ ||
ಹರಿಯ ನೆನೆಸಿದ ಹಗಲು ಮುಕ್ತಿಗೆ ಬಲು ಮಿಗಿಲು |
ಹರಿಯ ನೆನೆಸದ ಹಗಲು ನರಕಕ್ಕೆ ತಗಲು ‖ ೨ ‖

ಹರಿಯ ನೆನೆಸಿದ ಮಧ್ಯಾಹ್ನ ಸುಧಾಪಾನ |
ಹರಿಯ ನೆನೆಸದ ಮಧ್ಯಾಹ್ನವೇ ಕಾನನ ||
ಹರಿಯ ನೆನೆಸಿದ ಸಾಯಂಕಾಲವೇ ಸುಕಾಲ |
ಹರಿಯ ನೆನೆಸದ ಸಾಯಂಕಾಲವೇ ದುಷ್ಕಾಲ ‖ ೩ ‖

ಹರಿಯ ನೆನೆಸಿದ ದಿನವು ನರನಿಗೆ ಸಮ್ಮತವು |
ಹರಿಯ ನೆನೆಸದ ದಿನವು ದುರ್ದಿನವು ‖
ಹರಿಯ ನೆನೆಸಿದ ನರನು ಅವನೇ ಕೃತಕೃತ್ಯ |
ಹರಿಯ ನೆನೆಸದ ನರಜನ್ಮ ವ್ಯರ್ಥಾ ‖ ೪ ‖

ಹರಿಯ ನೆನೆಸಿದ ರಾತ್ರಿ ತೀರ್ಥಕ್ಷೇತ್ರದ ಯಾತ್ರಿ |
ಹರಿಯ ನೆನೆಸದ ರಾತ್ರಿ ಪಂಚಪಾತ್ರಿ ||
ಪುರಂದರರ ಪ್ರಿಯ ಸಿರಿ ವಿಜಯವಿಠ್ಠಲನಂಘ್ರಿ |
ಮರಿಯದೆ ಸದಾ ನೆನೆವವನೆ ಮುಕ್ತ || ೫ ||

## ಬಂದು ನಿಲ್ಲೊ ದಯಾನಿಧೆ

ರಾಗ—ಆನಂದಭೈರವಿ ( ಸಾರಂಗ ) ಅಟತಾಳ ( ದೀಪಚಂದಿ )

ಬಂದು ನಿಲ್ಲೊ ದಯಾನಿಧೆ || ಪ ||

ಬಂದು ನಿಲ್ಲೊ ನಿನಗೊಂದಿಸುವೆನು ಗೋವಿಂದಾ |
ಗೋವಳರಾಯ ಸಂದೇಹಗೊಳಿಸದೆ || ಅ. ಪ ||

ಸದೋಷಕ ನಾನು ಸದಾ ನಿರ್ಮಲ ನೀನು |
ಪದೇಪದೇ ಪೇಳುವದುಚಿತವೇನೊ || ೧ ||

ಮನದೊಳು ಪೊಳೆದು ಚಿಂತನೆಗೆ ನೆಲೆಯಾಗಿ |
ಘನಮಹಿಮನೆ ಮಧ್ವಮುನಿಮನಮಂದಿರಾ || ೨ ||

ಕಡಗೋಲ ನೇಣ ಪಿಡಿದ ಪರಮಾನಂದ |
ಉಡುಪಿಯ ಸಿರಿಕೃಷ್ಣ ವಿಜಯವಿಠ್ಠಲರೇಯ || ೩ ||

## ಆನಂದಾ ಆನಂದಾ ಮತ್ತೆ ಪರಮಾನಂದಾ

ರಾಗ—ಶಂಕರಾಭರಣ ( ಭೈರವಿ ) ಆದಿತಾಳ ( ಕಹರವಾ )

ಆನಂದಾ ಆನಂದಾ ಮತ್ತೆ ಪರಮಾನಂದಾ |
ಆ ನಂದನನಂದನೊಲಿಯೆ ಏನಂದದ್ದೆ ವೇದವೃಂದಾ || ಪ ||

' ಅ ' ಮೊದಲು " ಕ್ಷ " ಕಾರಾಂತ ಈ ಮಹಾವರ್ಣಗಳೆಲ್ಲ |
ಸ್ವಾಮಿಯಾದ ವಿಷ್ಣುವಿನ ನಾಮವೆಂದು ತಿಳಿದವರಿಗೆ || ೧ ||

ಪೋಪದು ಬರುತಿಪ್ಪುದು ಕೋಪಶಾಂತಿ ಮಾಡುವುದು |
ರೂಪಲಾವಣ್ಯವು ಹರಿವ್ಯಾಪಾರವೆಂದವರಿಗೆ || ೨ ||

ಜಲಕಾಷ್ಠ ಶೈಲ ಗಗನ ನೆಲ ಪಾವಕ ವಾಯು ತರು |
ಫಲ ಪುಷ್ಪ ಬಳ್ಳಿಲಿ ಹರಿ ಒಳಗೆ ವ್ಯಾಪ್ತನೆಂದವಗೆ || ೩ ||

ತಾರೊ ಬಾರೊ ಬೇರೊ ಸಾರೊ ಮಾರೊ ತೋರೊ ಹಾರೊ |
ಹೋರೊ ಸೇರೊ ಕೋರೋದೆಂಬ ದಿಶಾಪ್ರೇರಣೆ ಎಂದವರಿಗೆ || ೪ ||

ಮಧ್ವಶಾಸ್ತ್ರ ಪ್ರವಚನ ಮುದ್ದುಕೃಷ್ಣನ ದರುಶನ |
ಸಿದ್ಧ ವಿಜಯವಿಠಲನ್ನ ಪೊಂದಿ ಕೊಂಡಾಡುವವರಿಗೆ || ೫ ||

## ಭೂರಮಣನೆ ಕಾಯೋ ನಿತ್ಯ

ರಾಗ--ಸಾವೇರಿ [ ಭೂಪ ] ಅಟತಾಳ [ ದೀಪಚಂದಿ ]

ಭೂರಮಣನೆ ಕಾಯೋ ನಿತ್ಯ || ಪ ||

ಸಂಸಾರವೆ ಸುಖವೆಂದು ಹಾರಯಿಸಿ ಬಾಳುವಾ |
ನರನ ಉದ್ಧಾರ ಮಾಡುವದು || ಅ. ಪ ||

ಕಂಗಳಿಂದಲಿ ಪರರ ಮನೆಯ ಅಂಗನೆಯರ ನೋಡಿ |
ಅಂಗಸಂಗವ ಬಯಸಿ ಪಾಪಕ್ಕೆ ಹಿಂಗದೆ ಗುರಿಯಾದೆ || ೧ ||

ಜಿಹ್ವೆಯನು ಪಿಡಿದು ನಿಲಿಸದೆ ವಿಹ್ವಲನಾಗಿ ಬಹುರಸ |
ಸಂಹ್ವತಿಯ ಮೆದ್ದು ಘುಣ್ಯದಾ ಗಹ್ವರವು ಮರಿಯದೆ || ೨ ||

ನಾಸಿಕಕೊನೆಯಿಂದ ಅನರ್ಪಿತ ವಾಸನೆ ಕೈಕೊಂಡು |
ಲೇಸಾಗಿ ಮನವುಬ್ಬಿ ನಲಿವುತ ದೇಶದೊಳಗೆ ಮೆರೆದೆ || ೩ ||

ಮುಪ್ಪಾಗುವತನಕ ಸುಖದಲ್ಲಿ ಅಪ್ಪಿದೆ ನಾರಿಯರ |
ಒಪ್ಪಿಹ ಧರ್ಮಗಳ ಖಳರಿಗೆ ಒಪ್ಪಿಸಿದೆನೊ ಹರಿಯೇ || ೪ ||

ದುಷ್ಟರಾಡುವ ವಾಕ್ಯ ಕೇಳುತ್ತ ಅಟ್ಟಹಾಸವ ಮಾಡಿ |
ಕೆಟ್ಟುಪೋಗುವೆನಯ್ಯಾ ವಿಜಯವಿಠ್ಠಲ ನೀನೆ || ೫ ||

## ನಿನ್ನ ದರುಶನಕೆ ಬಂದವನಲ್ಲವೊ

ರಾಗ—ಕಾಂಬೋದಿ ( ಸಾರಂಗ ) ಝಂಪೆತಾಳ ( ಝಪ್ )

ನಿನ್ನ ದರುಶನಕೆ ಬಂದವನಲ್ಲವೋ |
ಪುಣ್ಯವಂತರ ದಿವ್ಯಚರಣ ನೋಡಲಿ ಬಂದೆ || ಪ ||

ಎಲ್ಲೆಲ್ಲಿ ನಿನ್ನ ವ್ಯಾಪ್ತತನವಿರಲಿಕ್ಕೆ |
ಇಲ್ಲಿಗೆ ಬರುವ ಕಾರಣವಾವುದೋ ||
ಸೊಲ್ಲಿಗೆ ಕಂಭದಿ ತೋರಿದ ಮಹಾಮಹಿಮ |
ಅಲ್ಲಿ ಇಲ್ಲೇನಯ್ಯಾ ಬಲ್ಲ ಭಜಕರಿಗೆ || ೧ ||

ಕರೆದಾಗಲೆ ಓಡಿ ಬಂದೊದಗುವ ಸ್ವಾಮಿ |
ಮರಳಿ ಗಾವುದವೆಣಿಸಿ ಬರಲ್ಯಾತಕೊ ||
ನೆರೆ ನಂಬಿದವರಿಗೆ ಆವಲ್ಲಿಯಾದರೆ ಏನು |
ಅರಿದವರ ಮನದೊಳಗೆ ನಿಂದಾಡುವ ಚೆಂದವ || ೨ ||

ಕಠಿಣವೋ ನಿನ್ನ ಭಕುತರನ ನೋಡುವ ಲಾಭ |
ಪಠಿಯಲ ವೇದಗಳು ಸಾರುತಿವೆಯೋ ||

ವಟು ಮೊದಲಾದ ವೈಷ್ಣವಾಗ್ರೇಸರರಂಘ್ರಿ ।
ತ್ರುಟಿಯಾದರೂ ಸೋಕಲು ಗತಿಗೆ ದಾರಿ ॥ ೩ ॥

ಧ್ಯಾನಕ್ಕೆ ಸಿಲುಕುವನೆ ನಿನ್ನ ಕಾಣಲಿಬಹುದು ।
ಜ್ಞಾನಿಗಳು ಎಂತು ಬರುವರೊ ಅಲ್ಲಿಗೆ ॥
ಅನಂತ ಜನುಮದಲ್ಲಿ ಜಪ-ತಪ ಹೋಮ-ವ್ರತ ।
ಏನೇನು ಮಾಡಿದರು ಇಷ್ಟು ಜನ ಕೂಡುವದೆ ॥ ೪ ॥

ನೀನಿದ್ದ ಸ್ಥಾನದಲಿ ಸಕಲ ಪುಣ್ಯ ಕ್ಷೇತ್ರ ।
ನೀನಿದ್ದ ಸ್ಥಾನದಲಿ ಸರ್ವತೀರ್ಥ ॥
ನೀನಿದ್ದ ಸ್ಥಾನದಲಿ ಸಮಸ್ತ ಸಾತ್ವಿಕರು ।
ನಾನಿತ್ತ ಬರುವದು ನಿನಗೆ ತಿಳಿಯದೆ ಸ್ವಾಮಿ ॥ ೫

ಇದನೆ ಪಾಲಿಸು ಜೀಯಾ ನಿನ್ನದೊಂದೇ ಮೂರ್ತಿ ।
ನಿದರ್ಶನವಲ್ಲದೆ ಮಿಗಿಲಾವುದೋ ॥
ಪದೇಪದೇ ಮಧ್ವಮತವ ಪೊಂದಿದ ಸುಜನರ ।
ಹೃದಯದೊಳಗನಂತ ಪರಿ ನಿನ್ನ ರೂಪಗಳು ॥ ೬ ॥

ಭಳಿರೆ ತಿರುಮಲರಾಯ ನಿನ್ನ ಕರುಣಾರಸಕೆ ।
ನೆಲೆಗಾಣೆನೆಲೆ ನೆರೆಹೊರೆಯೊಳು ॥
ಒಲಿದು ಭಕುತರಿಗಾಗಿ ಮದುವೆ ಹಮ್ಮಿಕೊಂಡೆ ।
ಸುಲಭ ದೇವರದೇವ ವಿಜಯವಿಠ್ಠಲ ವೆಂಕಟಾ ॥ ೭ ॥

## ದಯಮಾಡು ದಯಮಾಡು ಎನ್ನಮೇಲೆ

ರಾಗ—ಕಾಪಿ ( ಭೀಮಪಲಾಸ ) ಝಂಪೆತಾಳ ( ಝಪ್ )

ದಯಮಾಡು ದಯಮಾಡು ಎನ್ನ ಮೇಲೆ |
ಅಂತರಂಗದೊಳಿಪ್ಪ ಅಚ್ಯುತಮೂರ್ತಿ || ಪ ||

ಗಂಧ ಪರಿಮಳ ಕುಸುಮ ಜಾತಿಮಲ್ಲಿಗೆ ಮಾಲೆ |
ಮಂದಾರ ಹಾರ ಕೊರಳೊಳಿಡಲೂ ||
ಚಂದವಿಲ್ಲವೆಂದು ತೆಗೆದು ಬಿಸಾಟಿ ಊರ |
ಹಂದಿಯಂದದಿ ಇಲ್ಲಿ ಇಪ್ಪ ನರಗೆ || ೧ ||

ಹೆತ್ತತುಪ್ಪ ಸಣ್ಣಶಾವಿಗೆ ಪರಮಾನ್ನ |
ಹೆತ್ತತಾಯಿ ತಂದು ಉಣ್ಣ ಬಡಿಸಲು ||
ಅತ್ತ ಮೊಗವಗಚಿ ತೊತ್ತು ಉಣಬಡಿಸಿದ |
ಹೊತ್ತು ಓಗರ ತಿಂದು ಇಪ್ಪೆನೆಂಬ ನರಗೆ || ೨ ||

ತುಂಬಿದ ಹೊಳೆಯಲ್ಲಿ ಹರಿಗೋಲಿಟ್ಟುಕೊಂಡು |
ಅಂಬಿಗ ತಡೆಯದೆ ದಾಟಿಸಲು ||
ಅಂಬುವಾಸನೆ ನೋಡಿ ದಾಟಿ ಪೋಗುವೆನೆಂ- |
ದೆಂಬ ಮಾನವನಾದೆ ವಿಜಯವಿಠ್ಠಲ ಕರುಣೀ || ೩ ||

## ಕೊಡುವವನು ನೀನು

ರಾಗ—ಕಾಂಬೋದಿ ( ಭೀಮಪಲಾಸ ) ಝಂಪೆತಾಳ ( ಝಪ್ )

ಕೊಡುವವನು ನೀನು ಕೊಂಬುವನು ನಾನು || ಪ ||

ಬಡಮನದ ಮನುಜನ ಬೇಡಿ ಫಲವೇನು || ಅ. ಪ ||

ಹದಿನಾರು ಹಲ್ಲುಗಳ ಬಾಯ್ದೆರೆದು ಬೇಡಿದರೆ |
ಇದು ಸಮಯವಲ್ಲೆಂದು ಪೇಳಿ ತಾನು ||
ಮದನಕೇಳಿಗೆ ನೂರನೊಂದಾಗಿ ನೋಡುವನು |
ಮದಡ ಮಾನವನೇನು ಕೊಡಬಲ್ಲ ಹರಿಯೆ || ೧ ||

ಗತಿಯಿಲ್ಲವೆಂತೆಂದು ನಾನಾಪ್ರಕಾರದಲಿ |
ಮತಿಗೆಟ್ಟು ಪೊಗಳಿದರೆ ಅವನು ತನ್ನ ||
ಸತಿ-ಸುತರ ಕೇಳಬೇಕೆಂದು ನೊಗತಿರುಹುವ |
ಅತಿದುರುಳ ಮತ್ತೇನು ಕೊಡಬಲ್ಲ ಹರಿಯೆ || ೨ ||

ಹೀನವೃತ್ತಿಯ ಜನರಿಗಾಸೆಯನು ಬಡುವದು |
ಗಾಣದೆತ್ತು ತಿರುಗಿ ಬಳಲಿದಂತೆ ||
ಭಾನುಕೋಟಿತೇಜ ವಿಜಯವಿಠಲರೇಯ |
ನೀನಲ್ಲದನ್ಯತ್ರ ಕೊಡುಕೊಂಬರುಂಟೇ || ೩ ||

## ವ್ಯಾಪಾರ ಉದ್ಯೋಗವನು ಮಾಡುವೆ

ರಾಗ—ವರಾಳಿ [ ಭೀಮಪಲಾಸ ] ಝಂಪೆತಾಳ [ ಝಂಪ್ ]

ವ್ಯಾಪಾರ ಉದ್ಯೋಗವನು ಮಾಡುವೆ |
ಭೂಪಾರದೊಳಗೆ ಎಲ್ಲರಿಗೆ ಬಲ್ಲಿದನಾಗಿ || ಪ ||

ಮುರಾರಿ ನಾಮವೆಂಬೊ ಮುಂಡಾಸವನೆ ಸುತ್ತಿ |
ಅರವಿಂದನಾಭವೆಂಬೊ ಅಂಗಿಯ ತೊಟ್ಟು ||
ನರಹರಿನಾಮವೆಂಬೊ ನಡುಕಟ್ಟನೆ ಸುತ್ತಿ |
ಕರುಣಾಸಾಗರನೆಂಬೊ ಕಠಾರಿಯನು ಸಿಕ್ಕಿಸಿ || ೧ ||

ಕಮಲನಾಭನೆಂಬೊ ಕಲಮದಾನಿ ಪಿಡಿದು |
ತಿಮಿರದೋಷವೆಂಬೊ ಪಾಯಿವೋಸು ಮೆಟ್ಟ ||
ಶಮೆದಮೆಯೆಂಬೊ ಪರಿಚಾರಕರ ಒಡಗೊಂಡು |
ಗಮಿಸಿದೆನೊ ಹರಿದಾಸರಿದ್ದ ಚಾವಡಿಗೆ || ೨ ||

ಪೋಗಿ ನಮಸ್ಕಾರವೆಂದು ತಲೆಬಾಗಿ ನಿಲ್ಲಲು |
ಭಾಗವತರು ಕರೆದು ಇಂಬನಿತ್ತು ||
ಯೋಗಕ್ಷೇಮವೆಲ್ಲ ವಿಚಾರಿಸಿ ಪ್ರೀತಿಯಲಿ |
ಈಗಳೆ ಕುಳಿತ ಅಚ್ಯುತನ ತೋರಿದರು || ೩ ||

ಕಂಡು ಕರವನು ಮುಗಿಯೆ ಕರುಣಾಸಾಗರನೆಂಬೊ |
ಮಂಡಲಾಧಿಪನು ಕರೆದು ಮನ್ನಿಸಿ ||
ಗಂಡುಗಲಿಯಾಗೆಂದು ಸಂಚುಗಾರಿಕೆ ತುಲಸಿ ||
ದಂಡೆ ಕೊರಳಿಗೆ ಹಾಕಿ ದಾಸರೊಳಗಿರಿಸಿದನು || ೪ ||

ಘನವಾದ ಉದ್ಯೋಗ ದೊರಕಿತು ನನಗಿನ್ನು |
ಅನುಮಾನವಿಲ್ಲವು ಎಂದೆಂದಿಗೂ ||
ದಿನದಿನಕೆ ಹರಿನಾಮವೆಂಬೋ ಲೆಖ್ಖ- |
ವನು ಬರೆದು ತ್ರಿಲೋಕದರಸಗೆ ಒಪ್ಪಿಸಿದೆ || ೫

ಬರೆದ ಲೆಖ್ಖವ ನೋಡಿ ದಯಪಯೋವಾರಿಧಿ |
ಹರುಷದಿಂದಲಿ ಎನಗೆ ಸಂಬಳಕ್ಕೆ ||
ಬರೆಸಿಕೊಟ್ಟನು ಸನದು ಕೇಶವಾದಿಯೆಂಬೊ |
ವರಹಗಳು ಎಂದಿಗಾದರು ಅಳಿವಿಲ್ಲದ || ೬ ||

ಈಸುದಿನ ಉದ್ಯೋಗಹೀನನಾಗಿ ನೊಂದೆ |
ದಾಸರಾ ದಯದಿಂದ ದೊರಕಿತಿಂದು ||
ಏಸು ಜನ್ಮದ ಸಂಚಿತ ಕರ್ಮ ಓಡಿಸಿ |
ಶ್ರೀಶ ವಿಜಯವಿಠ್ಠಲನಲ್ಲಿ ಬಾಳಿದೆನೊ || ೭ ||

## ಕೃಷ್ಣಾರ್ಪಿತವೆಂದು ಕೊಡಲು

ರಾಗ—ಪಾಡಿ [ ಭೂಪ ] ಝಂಪೆತಾಳ [ ದೀಪಚಂದಿ ]

ಕೃಷ್ಣಾರ್ಪಿತವೆಂದು ಕೊಡಲು ಎ- |
ಳ್ಳಷ್ಟಾದರೂ ಮೇರುಪರ್ವತ ಮೀರುವದು || ಪ ||

ಗಣ್ಯವಿಲ್ಲದೆ ಶಿಷ್ಯಸಹಿತ ಹರರೂಪ ಮುನಿ ಅ- |
ರಣ್ಯದಲಿ ಪಾಂಡವರು ಇರಲು ಬಂದು ||
ಪುಣ್ಯಬೇಕೆಂದೆನಲು ಒಂದು ದಳ ಶಾಖಾ ಕಾ- |
ರುಣ್ಯದಲಿ ಹರಿ ಎನಲು ಅಪರಿಮಿತವಾದುದು || ೧ ||

ಹಸ್ತಿನಾಪುರದಲ್ಲಿ ಸಕಲ ದೇವಾದಿಗಳ |
ಮಸ್ತಕದ ಮಣಿ ವಿದುರನ ಮನೆಯಲ್ಲಿ ||
ಹಸ್ತು ಬಂದುದಕೆ ಉಪಾಯವೇನೆಂದೆನಲು |
ಹಸ್ತದೊಳು ಪಾಲ್ಗುಡಿಯೆರಿಯೆ ಮಿಗಿಲಾದುದೊ || ೨ ||

ಅಣುಮಹತ್ತಾಗಲಿ ಆವಾವ ಕರ್ಮಗಳು |
ತೃಣನಾದರರಿತು ಅರಿಯದೆ ಮಾಡಲು ||
ಕ್ಷಣ ತನ್ನದೆನ್ನದೆ ಅರ್ಪಿತನೆ ನಿಕ್ಷೇಪ |
ಗುಣನಿಧಿ ವಿಜಯವಿಠ್ಠಲನ ಪುರದಲ್ಲಿ || ೩ ||

## ಹರಿಯ ಮರೆದುದಕಿಂತ ಪಾಪವಿಲ್ಲಾ

ರಾಗ—ಕಾಂಬೋದಿ ( ಬಾಗೇಶ್ರೀ ) ಝಂಪೆತಾಳ ( ಝಪ್ )

ಹರಿಯ ಮರೆದುದಕಿಂತ ಪಾಪವಿಲ್ಲಾ ।
ಹರಿಸ್ಮರಣೆಯಿಂದಧಿಕ ಪುಣ್ಯ ಮತ್ತೊಂದಿಲ್ಲಾ ॥ ಪ ॥

ಗೋಹತ್ಯ ಸುರಾಪಾನ ಕನಕತಸ್ಕರ ಸುಜನ- ।
ದ್ರೋಹ ಗುರುತಲ್ಪಗಮನ ಬಲು ಕಪಟ ವ್ಯಸನ ॥
ಬಾಹಿರವಾಗ್‌ದ್ವೇಷ ಪರದಾರಗಮನ ವಿ- ।
ವಾಹಗಳ ಮಾಣಿಸುವ ಪಾಪಕಿಂತಲಿ ಮೇಲು ॥ ೧ ॥

ಗಂಗಾನದಿಯಲ್ಲಿ ಸ್ನಾನ ಪ್ರಣವ ಆಚಮನ ।
ಹಿಂಗದಲೆ ಗಾಯತ್ರಿಮಂತ್ರ ಮೌನ ॥
ತುಂಗ ದಾನ-ಧರ್ಮ ವೃತ್ತಿ ಕ್ಷೇತ್ರ ರತುನ ।
ಬಂಗಾರಯಿತ್ತಧಿಕ ಬಹಳ ಪುಣ್ಯ ಮೇಲು ॥ ೨ ॥

ಹಾಸ್ಯವಿರೋಧ ಮದ ಮತ್ಸರ ಪರಕಾರ್ಯ ।
ದಾಸ್ಯದಲಿ ಕೆಡಿಸುವ ಶಠನ ಲೋಭಿ ॥
ವೈಶ್ವದೇವಾಹಿತ ಅತಿಥಿಗಳ ನಿಂದ್ಯರ- ।
ಹಸ್ಯ ದೂರುವ ಬಲು ಪಾಪಕಿಂತಲು ಮೇಲು ॥ ೩ ॥

ತೀರ್ಥಯಾತ್ರೆ ವೇದ ಭಾಗವತ ಪುರಾಣ ।
ಸಾರ್ಥಕ್ಯವಾದ ಪ್ರವಚನ ಶಾಸ್ತ್ರ ॥
ಪ್ರಾರ್ಥನೆ ಸ್ತೋತ್ರಗೀತ ಸಾರ ಪ್ರಬಂಧ ।
ಅರ್ಥ ಪೇಳುವ ಬಲು ಪುಣ್ಯಕಿಂತಲಿ ಮೇಲು ॥ ೪ ॥

ಮಿತ್ರಘ್ನ್ಯಗರಳಪ್ರಯೋಗ ಗರ್ಭಿಣಿವಧ ।
ಗೋತ್ರಸಂಸರ್ಗ ಬಲು ಪ್ರಾಣಹಿಂಸಾ ॥

ಕ್ಷೇತ್ರ ಅಪಹಾರ ಕ್ಷುದ್ರವಾಣಿ ನಿಜಕ- |
ಳತ್ರದಿ ದ್ರೋಹ ಬಲು ಪಾಪಕಿಂತಲಿ ಮೇಲು || ೫ ||

ವೇದಾದಿ ಕರ್ಮ ಸರ್ವದಲ್ಲಿ ಗಯಾಶ್ರಾದ್ಧ |
ಭೂಧರ ಸಮಾಗಮ ಸತ್ ಶ್ರವಣಾ ||
ಆದಿತ್ಯಚಂದ್ರ ಉಪರಾಗ ಪರ್ವಣಿ ನಾನಾ- |
ರಾಧನೆಯಲಿ ಬಲು ಪುಣ್ಯಕಿಂತಲು ಮೇಲು || ೬ ||

ಆವಾವ ಪಾಪ-ಪುಣ್ಯಗಳದರ ಕಿಂಕರವು |
ದೇವನ ನೆನೆಸಿದಂಥ ನೆನೆಯದಂಥ ||
ಜೀವರೊಳಗೊಬ್ಬ ಮುಕ್ತನು ಒಬ್ಬ ತಮಯೋಗ್ಯ |
ಕೈವಲ್ಯಪತಿ ನಮ್ಮ ವಿಜಯವಿಠ್ಠಲ ಪ್ರೇರಕಾ || ೭ ||

## ಪತಿತಪಾವನ ನಾಮ

ರಾಗ—ಸಾವೇರಿ ( ಭೈರವಿ ) ತ್ರಿಪುಟತಾಳ ( ಝಂಪ್)

ಪತಿತಪಾವನ ನಾಮ ಪೂರ್ಣಕಾಮಾ |
ಗತಿಯ ಪಾಲಿಸೊ ಎನಗೆ ಗುರುಸಾರ್ವಭೌಮಾ || ಪ ||

ಹದಿನಾರು ಸಾವಿರ ಸುದತಿಯರೆಲ್ಲರು |
ತ್ರಿದಶವಿರೋಧಿಯ ಸದನದಲ್ಲಿ ||
ಮುದದಿಂದ ಸೆರೆಬಿದ್ದು ಹದುಳ ಕಾಣದೆ |
ಸ್ತುತಿಸಿದರು ಮನದಿ ನಾರದನಿಂದ ನಲಿದಾಡಿ || ೧ ||

ಕಾರ್ತಿಕ ಮಾಸದಲಿ ಕಾಂತೆಯ ಒಡಗೂಡಿ |
ಕಾರ್ತರಥವನೇರಿ ಕೀರ್ತಿಪುರುಷಾ ||
ಧೂರ್ತನ ಕೊಂದು ಬಾಲೆಯರಾರ್ತವ ಪರಿಹರಿಸೆ |
ತೀರ್ಥಧರಾದಿಗಳು ನರ್ತನದಲಿ ಪೊಗಳೆ || ೨ ||

ಇಂದುಮುಖಿಯರ ಬಂಧನ ತರಿದವರು |
ಅಂದು ಉತ್ಸಾಹದಿಂದ ದ್ವಾರಾವತಿಗೆ ||
ಬಂದು ಅಭ್ಯಂಗದಲಿಂದ ಮಜ್ಜನ ಮಾಡೆ |
ಮಂದಾರ ಮಳೆ ನಭದಿಂದ ಸುರಿಯೆ || ೩ ||

ದೇವಶೃಂಗಾರವಾಗೆ ವೇದಾದಿಗಳು ನಿಂದು |
ತಾವೆಲ್ಲ ಮಣಿಭೂಷಣಾವಳಿಯಿಟ್ಟು ||
ನೋವ ಪೋಗಾಡಿಸಿ ಪಾವನರಾಗಿ ಸುಖ- |
ವನಧಿಯೊಳು ಮೀಯುತ್ತ ಕೊಂಡಾಡೆ || ೪ ||

ನರಕಾಸುರನ ಕೊಂದು ಇರುಳು ಈ ಪರಿಯಲ್ಲಿ |
ಹರಿ ಮಾಡಿದ ಚರಿತೆ ತಿಳಿದುದನು- ||
ಚ್ಚರಿಸಿದವನ ಕುಲ ನರಕದಿಂದುದ್ಧಾರ |
ವೊರೆಹೊಕ್ಕೆ ಇದಕೇಳಿ ವಿಜಯವಿಠ್ಠಲರೇಯಾ || ೫ ||

## ಎಲ್ಲಿದ್ದರೇನು ಶ್ರೀಹರಿಗಲ್ಲದವನು

ರಾಗ--ಕಾಂಬೋದಿ [ ಮಾಲಕಂಸ ] ಝಂಪೆತಾಳ [ ಝಪ್ ]

ಎಲ್ಲಿದ್ದರೇನು ಶ್ರೀಹರಿಗಲ್ಲದವನು || ಪ ||

ನಿಲ್ಲದೆ ಜಪಿಸಿದರೆ ಸಲ್ಲುವನೆ ಸದ್ಗತಿಗೆ || ಅ. ಪ ||

ಕಪ್ಪೆ ಕಮಲದ ಬಳಿಯೆ ತಪ್ಪದೆ ಅನುಗಾಲ |
ಇಪ್ಪುದೈ ಒಂದು ಅರೆಘಳಿಗೆ ಬಿಡದೆ ||
ಒಪ್ಪದಿಂದಲಿ ಅದರ ಪರಿಮಳದ ಸೊಬಗ ನೀ- |
ಕಪ್ಪೆ ವಾಸನೆಗೊಂಡು ಹರುಷಪಡಬಲ್ಲುದೆ || ೧ ||

ಹಾಲುಕೆಚ್ಚಲು ಬಳಿಯೆ ತೊಣಸಿ ಹತ್ತಿಕೊಂಡು |
ಕಾಲವನು ಕಳೆವ ಬಗೆ ಬಲ್ಲಿರೆಲ್ಲ ||
ವೇಳೆವೇಳೆಗೆ ಹಸುವ ಕರೆದುಂಬ ನರನಂತೆ |
ಕೇಳು ತೊಣಸಿಯು ಉಂಡು ಹರುಷಪಡಬಲ್ಲುದೆ || ೨ ||

ತುಳಸಿ ಸಾನ್ನಿಧ್ಯದಲಿ ನೀರುಳ್ಳಿಯನು ಹಾಕಿ |
ಹೊಲಸು ಹೋಗ್ದುದೆ ಹಲವು ಕಾಲಿದ್ದರೆ ||
ತಿಳಿವಳಿಕೆ ಇಲ್ಲದವ ಸಿರಿ ವಿಜಯವಿಠ್ಠಲನ |
ಬಳಿಯಲಿದ್ದರೇನು ದೂರಿದ್ದರೇನು || ೩ ||

## ನಿನ್ನ ಚಿತ್ತಕೆ ಬಂದುದನು ಮಾಡು

ರಾಗ-- ಕಾಂಬೋದಿ ( ಮಾಲಕಂಸ ) ಝಂಪೆತಾಳ ( ಝಪ್ )

ನಿನ್ನ ಚಿತ್ತಕೆ ಬಂದುದನು ಮಾಡು ಸರ್ವೇಶ |
ಎನ್ನ ಸ್ವಾತಂತ್ರ್ಯ ಲವಮಾತ್ರ ಉಂಟೇ ಸ್ವಾಮಿ || ಪ ||

ಅನಂತಾನಂತ ಜನ್ಮಕಾದರು ಒಮ್ಮೆ |
ಚಿನ್ನ ಗೋಪಾಲಕೃಷ್ಣದೇವ || ಅ. ಪ ||

ಛೀ ಎನಿಸು ಜನರಿಂದ ನಿಂದ್ಯವನು ಮಾಡಿಸು |
ಬಾಯದೆರೆಸೊ ಹೊಟ್ಟೆಗಾಗಿ ||
ಗಾಯನವ ಮಾಡಿಸು ಗುಪ್ತದಲ್ಲೇ ಇರಿಸು |
ದಾಯಾದಿಗಳಿಗೊಪ್ಪಿಸು ||
ರಾಯಪದವಿಯ ಕೊಡಿಸು ರಾಜ್ಯವೆಲ್ಲವ ಮೆರೆಸು |
ಕಾಯಕ್ಲೇಶವನು ಪಡಿಸು ||
ಮಾಯಾಧವನೆ ನಿನ್ನ ಮಹಿಮೆಯ ತಿಳಿದವರಾರು |
ನ್ಯಾಯ ಅನ್ಯಾಯವಾಗೆ ಶ್ರೀಶ || ೧ ||

ಧನವನ್ನೆ ಕೊಡಿಸು ದಾನವನೆ ಮಾಡಿಸು ।
ಗುಣವುಳ್ಳ ಮನಜನೆನಿಸು ॥
ಮನಸು ಚಂಚಲನೆನಿಸು ಮಾತುಗಳ ಪುಸಿಯೆನಿಸು ।
ಕ್ಷಣದೊಳಗೆ ಶುದ್ಧನೆನಿಸು ॥
ಋಣದ ಭಯವನೆ ಹೊರಿಸು ರಿಕ್ತ ನಾನೆಂದೆನಿಸು ।
ತೃಣದಂತೆ ಮಾಡಿ ನಿಲಿಸು ॥
ಪ್ರಣತ ಜನರಿಗೆ ನಿತ್ಯ ಮನದಿಚ್ಛೆಗಾರನೆ ।
ದಿನ ಪ್ರತಿದಿವಸವಾಗೆ ದೇವ ॥ ೨ ॥

ಯಾತ್ರೆಯನೆ ಮಾಡಿಸು ಯೋಚನೆಯಲೇ ಇರಿಸು ।
ಪಾತ್ರಜನರೊಳು ಪೊಂದಿಸು ॥
ಗೋತ್ರ ಉತ್ತಮನೆನಿಸು ಗೋವುಗಳ ಕಾಯಿಸು ।
ಧಾತ್ರಿಯೊಳು ನೀಚನೆನಿಸು ॥
ಮೈತ್ರರೊಳು ಕೂಡಿಸು ಮೈಗೆಟ್ಟವನೆನಿಸು ।
ಸ್ತೋತ್ರಕ್ಕೆ ಯೋಗ್ಯನೆನಿಸು ॥
ನೇತ್ರ ಮೂರುಳ್ಳವನು ಸ್ತುತಿಸಿದ ಮಹಾಮಹಿಮ ।
ರಾತ್ರಿ ಹಗಲು ಎನ್ನದೆ ದೇವ ॥ ೩

ಉಪವಾಸದಲ್ಲಿರಿಸು ಉಚಿತ ಭೋಜನ ಉಣಿಸು ।
ಜಪತಪವನೆ ಮಾಡಿಸು ॥
ಅಪಹಾಸ್ಯ ಮಾಡಿಸು ಅದ್ಭುತವನೈದಿಸು ।
ಗುಪಿತರೊಳಗಧಿಕನೆನಿಸು ॥
ಉಪಕಾರಿ ನರನೆನಿಸು ಉದ್ದಂಡನಿವನೆನಿಸು ।
ವಿಪುಳ ಮತಿಯಲಿ ನಿಲಿಸು ॥
ಅಪರಿಮಿತ ಗುಣನಿಧಿಯೆ ಆನಂದ ಮೂರುತಿಯೆ ।
ಸಫಲಮತಿಯೀವ ದೇವ ॥ ೪

ವೇದವನು ಓದಿಸು ವೇದಾರ್ಥಗಳ ನುಡಿಸು |
ಓದಿದರು ದಡ್ಡನೆನಿಸು ||
ಹಾದಿಯನು ತಪ್ಪಿಸು ಹಿತದವರನಗಲಿಸು |
ಸಾಧುಮಾರ್ಗವನೆ ಕೊಡಿಸು ||
ಬಾಧೆಗಳನಟ್ಟಿಸು ಭಕುತಿವೆಗ್ಗಳನೆನಿಸು |
ಉದರಗೋಸುಗ ತಿರುಗಿಸು ||
ಪಾದದಲಿ ಗಂಗೆಯನು ಪೆತ್ತ ಪರಮಾನಂದ |
ಮೋದ ವಿನೋದವಾಗೆ ದೇವ || ೫ ||

ಕುಣಿಕುಣಿದಾಡಿಸು ಕಾಶಿಯಲಿ ಪೊಂದಿಸು |
ಮಣಿಭೂಷಣವ ತೊಡಿಸು ||
ಘನಕವನ ಪೇಳಿಸು ಕೌತುಕವನೈದಿಸು |
ವನಭುವನದೊಳು ನಿಲಿಸು ||
ಪ್ರಣವ ಮಂತ್ರವ ಜಪಿಸು ಪ್ರಕಟಭಯವ ಬಿಡಿಸು |
ಬಿನುಗು ವೈರಾಗ್ಯನೆನಿಸು |
ಜನನಿತನುಜರ ಕೂಡೆ ಅನುಸರಿಸಿ ನಡೆವಂತೆ |
ಎನಗೆ ನೀನೆ ಸದ್ಗತಿ ಸ್ವಾಮಿ || ೬

ಯಾವುದಾದರು ನೀನು ಇತ್ತುದಕೆ ಎನಗಿಷ್ಟು |
ನೋವು ಒಂದಾದರಿಲ್ಲ ||
ಜೀವೇಶರೊಂದೆಂಬ ದುರ್ಮತವ ಕೊಡದಿರು |
ಭಾವದಲಿ ನಾ ಬೇಡುವೆ ||
ಆವಾವ ನರಕದಲಿ ಬಹುಕಾಲವಿಟ್ಟರು ಇಪ್ಪೆ |
ನಾನೊಲ್ಲೆ ಮಿಥ್ಯಮತವ ||
ಕಾವಕರುಣಿ ನಮ್ಮ ವಿಜಯವಿಠ್ಠಲರೇಯ |
ಪಾವನ್ನ ಮಾಳ್ಪ ಶಕ್ತ ವ್ಯಕ್ತ || ೭ ||

## ಪತಿತನ್ನ ಪಾವನ ಮಾಡುವ ರಂಗಾ

ರಾಗ—ಸಾವೇರಿ [ ದರ್ಬಾರಿ ಕಾನಡಾ ] ಝಂಪೆತಾಳ [ ಝಪ್ ]

ಪತಿತನ್ನ ಪಾವನ ಮಾಡುವ ರಂಗಾ ।
ಗತಿಯಿಲ್ಲದವರಿಗೆ ಗತಿಯೋ ನೀನೇ ಗತಿ ॥ ಪ ॥

ನಿಂದಿರಲು ನೆರಳಿಲ್ಲ ನಿಲ್ಲಲು ನೆಲೆಯಿಲ್ಲ ।
ತಂದಿ-ತಾಯಿಯೆಂಬೋರು ಮೊದಲೆ ಇಲ್ಲ ॥
ಒಂದು ಸಂಗತಿ ಇಲ್ಲ ಪಡದಾನಂದನರಿಲ್ಲ ।
ಬಂಧು-ಬಳಗದವರು ಆರಿಲ್ಲ ಹರಿಯೇ ॥ ೧ ॥

ಕುಡಿಯಲು ನೀರಿಲ್ಲ ಕಾಲಿಡಲು ಇಂಬಿಲ್ಲಾ ।
ಪಿಡಿವೆನೆಂದರೆ ಮೇಲೆ ಕೊಡೆಯಿಲ್ಲ ॥
ಒಡನೆ ಬರುವರಾರಿಲ್ಲ ಸಂಗಡದಿ ।
ಅಡಿವೆನೆಂದರೆ ವಳ್ಳಿಗಾಯಿತೊ ಹರಿಯೇ ॥ ೨ ॥

ಧೈರ್ಯಕೊಡುವವರು ಇಲ್ಲ ದಾತರೊಬ್ಬರಿಲ್ಲ ।
ಕಾರ್ಯವೆಂದರೆ ಕೇಳಿ ಅರಿವರಿಲ್ಲಾ ॥
ವೀರ್ಯವು ಎನಗಿಲ್ಲ ವಸಿಷ್ಠನು ನಾನಲ್ಲ ।
ಧೈರ್ಯವು ದುಃಖವು ವೆಗ್ಗಳಿಸಿತೋ ಹರಿಯೆ ॥ ೩ ॥

ತನ್ನವರು ತನಗಿಲ್ಲ ತಾಳು ಎಂಬವರಿಲ್ಲ ।
ಸಣ್ಣ ಮನಸ್ಸು ಅಲ್ಲದೇ ಘನವುಯಿಲ್ಲ ॥
ಮುನ್ನಮಾಡಿದ ಕರ್ಮ ಬೆನ್ನ ತೊಲಗಲಿಲ್ಲ ।
ಇನ್ನು ಜನ್ಮ ವ್ಯರ್ಥವಾಯಿತೊ ಹರಿಯೆ ॥ ೪ ॥

ಸಾಕು ಈ ದುಷ್ಕೃತ ಬೇಕು ನಿನ್ನಯ ಪಾದ |
ಸಾಕಾರ ಮಾಡಿಕೊಂಬವರ ಸಂಗಡ ||
ಶ್ರೀಕಾಂತ ವೆಂಕಟ ವಿಜಯವಿಠ್ಠಲರೇಯ ||
ನೀ ಕರುಣಿಸಿದರೆ ಸಕಲಾರ್ಥವಹುದು || ೫ ||

## ಮಾನ ನಿನ್ನದು ಅಭಿಮಾನ ನಿನ್ನದು

ರಾಗ—ಭೈರವಿ [ ಭೀಮಪಲಾಸ ] ಝಂಪೆತಾಳ [ ಝಪ್ ]

ಮಾನ ನಿನ್ನದು ಅಭಿಮಾನ ನಿನ್ನದು |
ದಾನವಾಂತಕ ರಂಗ ದಯಮಾಡಿ ಸಲಹೊ || ಪ ||

ಒಡೆಯಳು ಕುಳಿತಿರಲು ತೊತ್ತಿನ ಮುಂದಲಿಯ |
ಪಿಡಿದೆಳೆದೊಯ್ದು ಘಾಸಿಯನು ಮಾಡಿ ||
ಅಡಿಗಡಿಗೆ ಅಪಮಾನಗೊಳಿಸಿ ಕೊಲೆ ಮಾಡಿದರೆ |
ಒಡತಿಗಲ್ಲದೆ ಕೊರತೆ ಅವಳಿಗೇನಯ್ಯ || ೧ ||

ಸದನದೊಳು ಪುರುಷನು ಇರುತಿರಲು ಹೆಂಡತಿಯ |
ಎದೆಯ ಮೇಲಿನ ಸೆರಗು ಸೆಳೆದುಕೊಂಡು ||
ಒದೆದು ಕೈ-ಕಾಲಿಂದ ಮಾನಹಾನಿ ಮಾಡಿದರೆ |
ಅದು ಪುರುಷಗಲ್ಲದೆ ವಧುವಿಗೇನಯ್ಯಾ || ೨ ||

ಪಿತನ ಬಳಿಯಲಿ ಮಗನು ಕುಳಿತಿರಲು ಪರ ಮನುಜ |
ಖತಿಯಿಂದ ಕೆಡಹಿ ಪಾಶದಲಿ ಕಟ್ಟಿ ಬಿಗಿಯಾಗಿ ||
ಮತಿಗೆಡಿಸಿ ನಾನಾಪ್ರಕಾರ ಭಂಗವ ಮಾಡೆ |
ಕ್ಷತಿ ತಂದೆಗಲ್ಲದೆ ಕುವರಗೇನಯ್ಯಾ || ೩ ||

ಆಳುವ ಧೊರೆಯ ಸಮ್ಮುಖದಲ್ಲಿ ಬಂಟನಿರೆ |
ಖೂಳರು ಬಂದು ಶಸ್ತ್ರವನು ತೆಗೆದು ||
ಕೀಳು ಮಾಡಿ ಬಂಟನ ಅಭಿಮಾನ ಕೊಂಡರೆ |
ಏಳಲವು ಅರಸಗಲ್ಲದೆ ಬಂಟನಿಗೇನು　　　　|| ೪ ||

ಸತ್ಯಸಂಕಲ್ಪ ಸರ್ವೋತ್ತಮ ಸುರಪಾಲ !
ಅತ್ಯಂತ ಪಾಲಸಾಗರ-ಸದನನೆ ||
ಭೃತ್ಯರಪಮಾನ ಅಭಿಮಾನ ನಿನ್ನದು ಸದಾ |
ನಿತ್ಯ ತೃಪ್ತನೆ ಸಿರಿ ವಿಜಯವಿಠ್ಠಲರೇಯಾ　　　　|| ೫

## ಎಂದಿಗಾಹುದೋ ನಿನ್ನ ದರುಶನ

ರಾಗ—ತೋಡಿ ( ಬಿಲಾವಲ್ )　　　　　　　　ರೂಪಕತಾಳ ( ತೀನ್ ತಾಲ )

ಎಂದಿಗಾಹುದೋ ನಿನ್ನ ದರುಶನ |
ಇಂದಿರೇಶ ಮುಕುಂದ ಕೇಶವ　　　　|| ಪ ||

ಗಾನಲೋಲನೆ ದೀನವತ್ಸಲ |
ಮಾನದಿಂದಲಿ ನೀನೆ ಪಾಲಿಸೋ　　　　|| ೧ ||

ಯಾರಿಗೆ ಮೊರೆ ಇಡುವೆ ಶ್ರೀಹರಿ |
ಸಾರಿ ಬಂದು ನೀ ಈಗಲೇ ಪೊರಿ　　　　|| ೨ ||

ಗಜವ ಪಾಲಿಸೊ ಗರುವದಿಂದಲಿ |
ಭುಜಗಶಯನ ಶ್ರೀ ವಿಜಯವಿಠಲಾ　　　　|| ೩ ||

## ದಾಸ ದಾಸ ದಾಸರ ದಾಸ್ಯವ ಕೊಡೊ

ರಾಗ—ದ್ವಿಜಾವಂತಿ ( ಯಮುನ ಕಲ್ಯಾಣ ) ಆದಿತಾಳ ( ಧುಮಾಳಿ )

ದಾಸ ದಾಸ ದಾಸರ ದಾಸ್ಯವ ಕೊಡೊ |
ದೋಷರಾಶಿಯಳಿದು ॥ ಪ ॥

ಶ್ರೀಶ ಧೀಶ ಸರ್ವೇಶ ಸುರೇಶ್ವರ |
ಭಾಸುರ ಗುಣಗಣ ಭವ್ಯಶರೀರ ॥ ಅ. ಪ ॥

ಚಿತ್ತ ನಿನ್ನ ಪದಸೇವೆಯೊಳಿರಲಿ |
ಚಿಂತೆ ಇತರ ಬಿಡಲಿ ॥
ಅಂತರಂಗದಲ್ಲಾನಂದಿಸಲಿ |
ಅಹಂಕೃತಿಯನೆ ಬಿಡಲಿ ॥
ಸಂತತ ನಿನ್ನ ಪದಪಂಕಜ ಭಕ್ತರ |
ಪಂಥವ ಪಾಲಿಸೊ ಪರಮಪುರುಷ ಹರಿ ॥ ೧ ॥

ಅರಿಷಡ್ವರ್ಗಗಳಟವಿಯ ಖಂಡಿಸು |
ಆನಂದದಲಿರಿಸು ॥
ದುರುಳರ ಸಂಗವ ದೂರ ಮಾಡಿಸು |
ದುರ್ಮತಿಯನೆ ಬಿಡಿಸು ॥
ಸರಸ ಸಂಭ್ರಮ ಸನ್ನುತ ಭಕುತರೊಳ್ |
ನಿರುತವು ನಿಲ್ಲಿಸೊ ನೀರಜಾಕ್ಷ ಹರಿ ॥ ೨ ॥

ತ್ರಿಜಗನ್ಮೋಹನಾಕಾರಾ ತ್ರಿ- |
ಗುಣಾತೀತ ತೀರ್ಥಪಾದ ॥
ಭಜಕರ ಪಾವನ ಭವನುತಚರಣ |
ಋಜುಗುಣನುತಾಭರಣ ॥

ವಿಜಯವಿಠ್ಠಲಾಧೀಶ ವಿಶ್ವೇಶ್ವರ |
ಕುಜನವಿದಾರಣ ಕೋವಿದನುತ ಹರಿ || ೩ ||

## ವಿಠಲಾ ನಿನ್ನ ನಂಬಿದೆ

ರಾಗ— ( ಸಾರಂಗ ) ಝಂಪೆತಾಳ ( ದೀಪಚಂದಿ )

ವಿಠಲಾ ನಿನ್ನ ನಂಬಿದೆ ಎನ್ನ ಕಾಯೋ |
ಪುಟ್ಟುವದು ಬಿಡಿಸೊ ನಿನ್ನವರೊಳಗಿರಿಸೊ || ಪ ||

ಬಲುಕಾಲ ಮಲ-ಮೂತ್ರ ಡೊಳ್ಳಿನೊಳು ಬಿದ್ದು |
ಹಲುಬಿದೆ ಒಂದಿಷ್ಟು ನೆಲೆಗಾಣದೆ ನಾನು ||
ಹಲವು ಮಾತೇನು ಎನಗೆ ಬಿಡದು |
ಸಲಹಬೇಕಯ್ಯಾ ಸಮುದ್ರಶಯ್ಯಾ || ೧ ||

ಕರಪಿಡಿದು ಎತ್ತುವ ಬಿರುದು ಪರಾಕ್ರಮ |
ಮರಳಿ ಮಿಗಿಲೊಂದು ದೇವರಿಗೆ ಉಂಟೆ ||
ಮರೆವು ಮಾಡದೆ ಮಹಾದುರಿತವ ಪರಿ- |
ಹರಿಸು ಸ್ಮರಣೆಯನ್ನು ಇತ್ತು ಕೀರ್ತನೆ ಪೇಳಿಸೋ || ೨ ||

ಬಿನ್ನಹ ಲಾಲಿಸು ಚೆನ್ನ ಲಕುಮಿಪತಿ |
ಚೆನ್ನಾಗಿಡು ನಿತ್ಯ ಪ್ರಾಣನಾಥಾ ಅಭಯಹಸ್ತಾ ||
ಅನ್ನದಾತಾ ಸಿರಿ ವಿಜಯವಿಠಲರೇಯಾ !
ಸನ್ನಿಧಿಯಲ್ಲಿ ಎನ್ನ ಸಂತೋಷಪಡಿಸೋ || ೩ ||

## ಪರದೇಶಿ ನೀನು ಸ್ವದೇಶಿ ನಾನು

ರಾಗ— ಕಾಂಬೋದಿ ( ಬಾಗೇಶ್ರೀ ) ಝಂಪೆತಾಳ ( ಝಪ್ )

ಪರದೇಶಿ ನೀನು ಸ್ವದೇಶಿ ನಾನು ‖ ಪ ‖

ಪರಮ ಭಾಗವತರ ಬಾ ಹೋಗಿ ಕೇಳೋಣ ‖ ಅ. ಪ ‖

ಎನಗೆ ಜನಕನು ನೀನು ನಿನಗಾವ ಜನಕನೊ |
ಜನನಿ ಇಂದಿರೆದೇವಿ ನಿನಗಾವಳೊ ‖
ವನಜಪೀಠನು ಭ್ರಾತ ನಿನಗಾವ ಭ್ರಾತನೊ |
ಇನ ಸೋಮ ಮಾತುಳರು ನಿನಗಾವ ಮಾತುಳರೊ ‖ ೧ ‖

ಸುರನದೀ ಅಗ್ರಜಳು ನಿನಗೆ ಅಗ್ರಜಳಾರು |
ಶರನಿಧಿ ಭಾವ ನಿನಗಾರೊ ಭಾವ ‖
ಸ್ಮರನು ಕಿರಿಸಹಭವನು ನಿನಗೆ ಸಹಭವನಾರೊ |
ಸುರರು ಬಂಧುಗಳೆನಗೆ ನಿನಗಾರು ಬಾಂಧವರೊ ‖ ೨ ‖

ವರ ಇಳಾ ಸಾಮಾತೆ ನಿನಗೆ ಸಾಮಾತೆ ಯಾರೊ |
ಮರುತದೇವರು ಗುರು ನಿನಗಾರು ಗುರುವೊ ‖
ಸಿರಿಯರಸ ವಿಜಯವಿಠ್ಠಲರೇಯನೆ ನಿನ್ನ |
ಚರಣಸೇವಕ ನಾನು ನೀನಾರ ಸೇವಕನೊ ‖ ೩ ‖

## ಕೂಗಿದರು ಧ್ವನಿ ಕೇಳದೆ ?

ರಾಗ— ಉದಯರಾಗ ( ಯಮನ್ ) ಝಂಪೆತಾಳ ( ಧುಮಾಳಿ )

ಕೂಗಿದರು ಧ್ವನಿ ಕೇಳದೆ ಶಿರ- |
ಬಾಗಿದರು ದಯಬಾರದೆ ‖ ಪ ‖

ಭೋಗಿಶಯನ ಭುವನಾಧಿಪತೇ ನಿನ್ನ |
ಆಗಮನವೆಂದಿಗೆ ಆಗುವದು ಪ್ರಭೊ || ಅ. ಪ ||

ಭಕ್ತರಿಗೊಲಿದವ ನೀನು ಖರೆ ಎ- |
ನ್ನತ್ತ ನೋಡುವದು ದೊರೆ ||
ಚಿತ್ತವಧಾನ ಪರಾಕು ಮಹಾಪ್ರಭು |
ಎತ್ತಣ ರಥವನು ಎತ್ತಿ ಬಾ ನೀಡು ದೊರೆ || ೧ ||

ಸಿಂಧುಶಯನ ಶೇಷಾದ್ರಿ ವರ ಸಿರಿ- |
ಮಂದಿರ ಭಕ್ತಕುಟುಂಬಧರ ||
ಸುಂದರ ಮೂರುತಿ ಒಂದಿನ ಸ್ವಪ್ನದಿ |
ಬಂದು ಪದದ್ವಯ ಚಂದದಿ ತೋರಿಸೊ || ೨ ||

ಕರುಣಾ ಶರಧಿಯು ನೀನಲ್ಲವೇ ಕೃಷ್ಣ |
ಶರಣಾಗತರಿಗೆ ದೊರೆಯಲ್ಲವೆ ||
ಮೊರೆಹೊಕ್ಕವರಿಗೆ ಮರೆಯಾಗುವರೆ |
ಸರಿಯೆ ಜಗದೊಳು ವಿಜಯವಿಠ್ಠಲರೇಯಾ || ೩ ||

## ನಂಬಿದೆ ನಿನ್ನ ನೀರಜಪಾದ

ರಾಗ—ಭೈರವಿ ( ಧೂಪ ) ಅಟತಾಳ ( ದೀಪಚಂದಿ )

ನಂಬಿದೆ ನಿನ್ನ ನೀರಜಪಾದ |
ಇಂಬಿನಲ್ಲಿಟ್ಟು ಸಲಹೊ ಪ್ರಸಾದ || ಪ ||

ಅಂಬರೀಷನ ಶಾಪ ಹಿಂಗಿಸಿ ಕಳೆದ ದ-
ಯಾಂಬುಧಿ ನೀನೆಂದು ಹಂಬಲಿಸಿದೆ ಹರಿಯೆ || ಅ. ಪ ||

ಉಗ್ರನ್ನ ಖಳ ವಂಚಿಸಿ ತನ್ನ ಕ- |
ರಾಗ್ರವಾ ಶಿರದಲ್ಲಿ ಇಡಬರಲು ||
ಅಗ್ರೇಶ ಕಾಯೆಂದು ಅವನೀಗ ಮೊರೆಯಿಡೆ |
ಶೀಘ್ರದಿಂದಲಿ ಬಂದು ಕಾಯ್ದ ಕರುಣಿಯೆಂದು || ೧ ||

ಕಾಲದೂತರು ಅಜಾಮಿಳನೆಳೆಯಲು |
ನಾಲಿಗೆಯಿಂದ ನಾರಗನೆನ್ನಲು ||
ಆಲಸ್ಯ ಮಾಡದೆ ನಿನ್ನ ದೂತರನಟ್ಟಿ |
ಓಲಗ ವೈಕುಂಠವಿತ್ತ ಬಾಂಧವನೆಂದು || ೨ ||

ಭೂತಳದೊಳು ನಿನ್ನನು ಪೋಲುವ |
ದಾತರ ನಾನೆಲ್ಲಿ ಕಾಣೆ ಶ್ವೇತವಾಹನ ||
ಮಸ್ತಕವನು ಉಳುಹಿದ ದಾತ |
ವಿಜಯವಿಠ್ಠಲನಹುದೆಂದು ದೃಢವಾಗಿ || ೩ ||

## ಸಕಲ ಕಾಲದಿ ಮಾಡಿದ ಕರ್ಮವು

ರಾಗ—ತೋಡಿ [ ಬಾಗೇಶ್ರೀ ] ಝಂಪೆತಾಳ [ ಝಪ್ ]

ಸಕಲ ಕಾಲದಿ ಮಾಡಿದ ಕರ್ಮವು |
ಭಕುತಿಯಿಂದಲಿ ಬಂದರ್ಪಿತವೆನ್ನಿ ಉಡುಪಿಯಲಿ || ಪ ||

ಯಾತ್ರೆಗಳ ಮಾಡಲಿ ತೀರ್ಥಗಳ ಮೀಯಲಿ |
ಸ್ತೋತ್ರಗಳ ಮಾಡಲಿ ಕೊಂಡಾಡಲಿ ||
ನೇತ್ರದಲಿ ನೋಡಿ ಕರಮುಗಿದು ನಮಸ್ಕರಿಸಲಿ |
ಹೋತ್ರವನು ಮಾಡಿ ಹಿತವಾಗಿ ನುಡಿಯಲಿ || ೧ ||

ದಾನವನು ಮಾಡಲಿ ದಾಕ್ಷಿಣ್ಯವಾಗಲಿ ।
ಮೌನವನು ಮಾಡಲಿ ಮಾತಾಡಲಿ ॥
ಕಾನನವ ಸೇರಲಿ ಕಂಡಲ್ಲಿ ತಿರುಗಲಿ ।
ಏನೇನು ಚರಿತೆಗಳ ಮಾಡುತಿರಲಿ ॥ ೨ ॥

ಪುಣ್ಯವಾದರು ಲೇಸೆ ಪಾಪವಾದರು ಹರಿ ।
ಮನ್ನಿಸಿ ತಾನೀಗ ತೆಗೆದುಕೊಂಡು ॥
ತನ್ನ ಸಮೀಪದಿ ಇಟ್ಟುಕೊಂಡು ಅವನ ।
ಘನ್ನ ಮೂರುತಿ ವಿಜಯವಿಠ್ಠಲ ಪೊರೆವ ॥ ೩ ॥

## ಮಾತನಾಡೈ ಮನ್ನಾರಿಕೃಷ್ಣ

ರಾಗ--ತೋಡಿ [ ಮಾಲಕಂಸ ] ಆದಿತಾಳ [ ತೀನ್ ತಾಲ ]

ಮಾತನಾಡೈ ಮನ್ನಾರಿಕೃಷ್ಣ ಮಾತನಾಡೈ । ॥ ಪ ॥

ದಾತನು ನೀನೆಂದು ಬಯಸಿ ಬಂದೆನು
ಮಾತನಾಡೈ ॥ ಅ. ಪ ॥

ಊದುವ ಸಿರಿ ಪೊಂಗೊಳಲೊ ಜಗ- ।
ದಾಧಾರದ ನಿಜ ಹೊಳೆಯೊ ॥
ಪಾದದ ಪೊಂಗೆಜ್ಜೆ ಘಳಿಲೊ ಸರ್ವ ।
ವೇದಗಳರಸುವ ಕಲ್ಪಕ ನೆಳಲೊ ॥ ೧ ॥

ಕಸ್ತೂರಿ ತಿಲಕದ ಮದವೊ ಮು- ।
ಕುಟ ಮಸ್ತಕದಿ ಝಗಝಗವೊ ॥
ವಿಸ್ತರದಿ ಪೊತ್ತ ಜಗವೊ ಪರ- ।
ವಸ್ತುವು ನಂದಯಶೋದೆಯ ಮಗುವೊ ॥ ೨ ॥

ನವನೀತವ ಪಿಡಿದ ಕರವೊ ನವ- |
ನವ ಮೋಹನ ಶೃಂಗಾರವೊ ||
ಅವತರಿಸಿದ ಸುರತರುವೊ ಶತ- |
ರವಿಯಂದದಿ ಉಂಗುರವಿಟ್ಟ ಭರವೊ || ೩ ||

ಆನಂದ ಜ್ಞಾನದ ಹೃದವೊ ಶುಭ- |
ಮಾನವರಿಗೆ ಬಲು ಮೃದುವೊ ||
ಆನನ ಛವಿಯೊಳು ಮಿದುವೊ ಪಾಪ- |
ಕಾನನ ದಹಿಸುವ ಪಾವಕ ಪದವೊ || ೪ ||

ತ್ರಿಜಗದಧಿಕ ಪಾವನನೊ ಪಂ- |
ಕಜನೇತ್ರಿಯ ನಾಯಕನೊ ||
ಅಜಭವಾದಿಗಳ ಜನಕನೊ ನಮ್ಮ |
ವಿಜಯವಿಠಲ ಯದುಕುಮಾರಕನೊ || ೫ ||

# ಗೋಪೀದೇವಿ ಎಂತು ಪೇಳಲಿ

ರಾಗ--ಭೈರಾಗ [ ಭೂಪ ] ಏಕತಾಳ [ ದೀಪಚಂದಿ ]

ಗೋಪಿದೇವಿ ಎಂತು ಪೇಳಲಿ ನಾನೆಂತು ತಾಳಲಿ || ಪ ||

ಶ್ರೀಪತಿ ಬಂದು ನಿಂದು ಏಕಾಂತವನ್ನು ಆಡುತಾನೆ |
ಪಾಪ ಇಂಥಾದುಂಟೇನೆ ಕೇಳೆ ಲಕ್ಷ್ಮೀಕಾಂತನೀತನೆ ||
ಮಂಥನ ಮಾಡುವಲ್ಲಿ ಮಂಥಣಿಯ ಒಡೆದನು |
ಕುಂತಳವ ಪಿಡಿದು ಎನ್ನ ಕುಳ್ಳಿರಿಸಿದಾ
ಕಿರಿಬೆವರನೊರಸಿದಾ || ೧ ||

ಚಿಕ್ಕಮಕ್ಕಳ ಕೂಡಿ ಚಕ್ಕನೆ ತಾ ಬಂದು ಬೇಗ |
ಬೆಕ್ಕುಕುನ್ನಿ ಮರ್ಕಟವ ತಂದನವ್ವಾ ಇದು ಚಂದವೇನವ್ವ ||
ಉಕ್ಕುತಿಹ ಪಾಲ್ಗೊಡಗಳ ಉರುಳಿಸಿದಾ ಸುಮ್ಮನೆ |
ಚೊಕ್ಕವೇನೆ ಸುಮ್ಮನೆ ಮೊಸರ ಸುರಿದಾ
ಮೀಸಲು ಮುರಿದಾ || ೨ ||

ರಕ್ಕಸರಗಂಡ ನಮ್ಮ ರಾಜ್ಯದೊಳಗಿವಗಿನ್ನು |
ತಕ್ಕ ಬುದ್ಧಿಯ ಪೇಳುವರು ದಾರು ಮೀರಿದ ಗೋಪಗೆ ||
ಸಿಕ್ಕ ಪಿಡಿದೇವೆಂದರೆ ಸಿಕ್ಕನಮ್ಮ ಇವಗುಡಿವಡ್ಡಿ ಬೇಡವೇ |
ಕಕ್ಕಸದಲಿ ಬಲು ಕಕ್ಕುಲಾತಿಯಲಿ || ೩ ||

ಬಿರಬಿರನೆ ತಾ ಬಂದು ಬೆದರಿ ಎನಗಂದು |
ಹರವಿಯ ಹಾಲು ಕುಡಿದಾ ತಾ ಎತ್ತ ಓಡಿದನೆ |
ವಾರಿಗಣ್ಣಿನಿಂದಲಿ ನೋಡಿ ಒದಗಿ ಬಳಿಗೆ ಬಂದು |
ಘೋರವಾದ ಕುಚಗಳ ಪಿಡಿದಾನೆ ಬಲಿದನೇನೆ || ೪ ||

ಹಾರಪದಕವು ಹಿಡಿಹಿಡಿ ಎಂದು ಎನ್ನ ಕೂಡ ।
ಸರಸವನಾಡಲಿಕ್ಕೆ ಅರಸನೇನೆ ನಮಗೆ ಪುರುಷನೇನೆ ॥
ಪುರುಷರು ಕಂಡರೆನ್ನ ಪರಿಪರಿ ಬಾಧಿಸ್ಯಾರು ।
ತರಳನ ಕರೆದ್ಹೇಳು ತಿದ್ದಿ ನೀನು ಇವಗೆ ಬುದ್ಧಿ ॥ ೫ ॥

ಚಂಡನಾಡುತಲಿ ಚಿಕ್ಕ ಮಿಂಡಿಯರ ಕಂಡು ತಾನು ।
ಚಂಡು ಅಂತ ಕುಚಗಳ ಓಡಿದಾನೆ ಇಂಥದುಂಟೇನೆ ॥
ಭಂಡು ಮಾಡತಾನೆ ಭಂಡಿಯು ಗೋವಳಗಿಂದು ।
ದಂಡಿಸವ್ವಾ ದಂಡವನು ಕೊಡು ನೀನು ॥ ೬ ॥

ಚಂಡಪ್ರಚಂಡನಿವನು ಗೋಪಿಕೆಯರಿಗೆಲ್ಲ ।
ಉದ್ದಂಡನಿವನು ತಂಡತಂಡದಲಿ ತುರು- ।
ಹಿಂಡುಗಳ ಕಾಯುವ ಗೊಲ್ಲಬಾಲಕನಮ್ಮಾ ।
ಪಾಂಡುರಂಗ ವಿಜಯವಿಠ್ಠಲರಾಯ ಬಲುಧಿಟ್ಟನಿವನು ॥ ೭ ॥

## ಊಟವನು ಮಾಡು ಬಾ ಉದಧಿಶಯನಾ

ರಾಗ—ಪಾಡಿ ( ಮಾಲಕಂಸ ) ಝಂಪೆತಾಳ ( ಝಪ್ )

ಊಟವನು ಮಾಡು ಬಾ ಉದಧಿಶಯನಾ ।
ಆಟವನು ಸಾಕುಮಾಡಿ ಅತಿ ವೇಗದಿಂದಲಿ ॥ ಪ ॥

ಕಾಯಿಪಲ್ಲೆ ಒಂದೊಂದು ನೂರು ಪರಿ ।
ತೋಯು ಸಂಡಿಗೆ ಶಳದೆ ಹುಳಿ ಸಾರು ॥
ಪಾಯಸ ನೊರೆಹಾಲು ಸಕ್ಕರೆಗೂಡಿಸಿ ।
ತಾಯಿ ದೇವಕಿಯು ಎಡೆಯ ಮಾಡಿದಳು ತಂದು ॥ ೧ ॥

ಯಾಲಕ್ಕಿಹಾಕಿದ ಹೋಳಿಗೆಯು ಪರಿಮಳ |
ಸಲೆ ಶಾಲ್ಯೋದನ ಕರಿದ ಭಕ್ಷ್ಯಾ ||
ಮೇಲಾದ ಇಂಗು-ಜೀರಿಗೆ ಮೆಣಸಿನ ಹುಗ್ಗಿ |
ಶ್ರೀಲಕುಮಿದೇವಿ ಎಡೆ ಮಾಡಿದಳು ತಂದು || ೨ ||

ಕಸಕಸಿ ಎಳ್ಳು ಲಡ್ಡಿಗೆಯು ಅಪ್ಪಾಲು ಅತಿ- |
ರಸ ದೋಸೆ ಬೆಣ್ಣೆ ಸೂಸಲಗಡಬು ||
ಹಸನಾಗಿ ಕರಿದ ಹಪ್ಪಳ ಸಂಡಿಗೆ ನಿನ್ನ |
ಸೊಸೆ ಸರಸ್ವತಿ ಎಡೆ ಮಾಡಿದಳು ತಂದು || ೩ ||

ಸಾದಾಕಳ ತುಪ್ಪ ಅಳಗಳಗ ತಿಳಿತುಪ್ಪ |
ಮಾಧುರ್ಯವಾಗಿದ್ದ ಜೇನು ಘೃತವು ||
ಕಾದಾರಿದ ಪಾಲು ಕಟ್ಟುಸುರು ಕೆನೆಮೊಸರು |
ಭೂದೇವಿ ನಲಿನಲಿದು ಎಡೆ ಮಾಡಿದಳೊ ತಂದು || ೪ ||

ಸರಳಿಗೆ ಗೌಲಿ ಬಟವೆ ಪರಡಿ ಸಜ್ಜಿಗೆ |
ಸರಸವಾಗಿದ್ದ ಚಿತ್ರಾನ್ನಂಗಳು ||
ಪರಿ-ಪರಿ ಫಲ ಪಕ್ವಾನ್ನ ಸೋಪಚಾರದಿ |
ಗಿರಿಜಾದಿಗಳು ತಾವು ಎಡೆಮಾಡಿದರೊ ತಂದು || ೫

ಖಾರುಳ್ಳ ಪಚ್ಚಡಿ ಹಚ್ಚಗೆ ಹಸಿರುವರ್ಣದ |
ವಾರುಣದಿ ಉಪ್ಪಿನಕಾಯಿ ಕೂಟಾ ||
ನೀರು ಮಜ್ಜಿಗೆ ನಿಂಬೆಹಣ್ಣಿನ ಹಿಂಡಿ |
ಭಾರತೀದೇವಿ ಎಡೆ ಮಾಡಿದಳೊ ತಂದು || ೬ ||

ಉಂಡ ತರುವಾಯುದಲಿ ಹರಿಯೇ ಪೀಠದಿ ಕುಳಿತು |
ಕೊಂಡು ಬಂದ ಗಂಧ ತಾಂಬೂಲವ ||
ಕೊಂಡು ರಕ್ಷಿಸಿ ಎನ್ನ ಸಿರಿವಿಜಯವಿಠ್ಠಲ |
ತೊಂಡನಾದ ಪುರಂದರಗೆ ಒಲಿದಂತೆ ಒಲಿದು || ೭ ||

## ಡೀಡೀ ಆಡೋಣೆ ರಂಗ

ರಾಗ—ಪಾಡಿ ( ದೇಸ್ ) ಆದಿತಾಳ ( ತೀನ್ ತಾಲ )

ಡೀಡೀ ಆಡೋನೆ ರಂಗ ಡೀಡೀ ಆಡೋನೆ |
ಓಡಿ ಓಡಿ ಬಂದು ತಲಿಗೆ ನೀ ಡೀಂಡೀಡೀ ಎಂದು || ಪ ||

ಮರಕತ ನವರತ್ನ ವಜ್ರ |
ಹರಳು ಕೆತ್ತಿಸಿದ ದ್ಯುಮಣಿ ||
ಕಿರಣ ಮುಕುಟ ಧರಿಸಿದ ಶಿರದಲಿ |
ಸರಿ ಸರಿ ಸರಿ ಸರಿ ಸರಿ ಹಾಯಿದು || ೧ ||

ಚಂದ್ರಶೇಖರ ಹಂಸವಾಹನ |
ಇಂದ್ರಾದ್ಯರಾಕಾಶದಲ್ಲಿ ದುಂ ದುಂ ||
ದುಂ ದುಂ ದುಂದುಭಿ ನುಡಿಸೆ |
ಬಂದೆ ಇಕ್ಕೋ ಬಂದೆ ಬಂದೆನುತ || ೨ ||

ಪಿಂತಿರುಗಿ ಪೋಗಿ ನೀನು |
ಅಂತರಿಸಿ ದೂರದಿಂದ ||
ನಿಂತು ವಿಜಯವಿಠ್ಠಲರೇಯಾ |
ಇತ್ತಿಂ ತ್ತಿಂ ತ್ತಿಂತ್ತಿಂತ್ತೆನುತಲಿ || ೩ ||

## ಒಲಿದವಳ ಬಿಡುವದು ಧರ್ಮವಲ್ಲ

ರಾಗ—ಕಾಂಬೋದಿ ( ಮಾಲಕಂಸ ) ಝಂಪೆತಾಳ ( ಝುಪ್ )

ಒಲಿದವಳ ಬಿಡುವದು ಧರ್ಮವಲ್ಲ ।
ಚೆಲುವ ನಿನಗಾಗಿ ನಾ ಯೇಸು ಕಾಲಕೆ ತಪವಿದ್ದೆ ॥ ಪ ॥

ತಂದೆ-ತಾಯಿಗಳಲ್ಲಿ ಪುಟ್ಟಿದಾ ಕ್ಷಣದಲ್ಲಿ ।
ಅಂದೆ ನೇಮಿಸಿದರು ಪೆಸರನಿಟ್ಟು ॥
ಸಂದೇಹಗೊಳದಿರು ಮೈಗೆಯವಳೆಂದು ।
ಬಂದ ಪ್ರಾಣವ ನೋಡು ಬರಿದೆ ಪೇಳುವಳಲ್ಲ ॥ ೧ ॥

ಕನ್ಯಾವಸ್ಥೆಯಲಿಂದ ನಿನ್ನ ಧ್ಯಾನವಲ್ಲದೇ ।
ಅನ್ಯಪುರುಷರಪೇಕ್ಷೆ ಮಾಡಲಿಲ್ಲ ॥
ಅನ್ಯಾಯವೇನು ಅಗಲಿ ಪೋಗುವರೇನೊ ।
ಅನ್ಯಥಾ ಈ ನುಡಿಗೆ ನಿಜಕೆ ನಿಲ್ಲುವೆ ನಾನು ॥ ೨ ॥

ಮಲದಲ್ಲಿ ಮೂರುದಿನ ಪೋಗಾಗಿ ಹೋಗಿದ್ದೆ ।
ಬಲು ಶುಚಿಯಾದೆನೊ ಶುದ್ಧ ಜಲದಿ ॥
ಘಳಿಗೆ ತಡೆದರೆ ಎನ್ನ ಪ್ರಾಣ ನಿಲ್ಲದೊ ನಿನ್ನನಗಲಿ ।
ಮೈ ತಪ್ಪಿಸಿ ದೂರ ಕರೆದೊಯ್ಯೊ ಕರುಣದಲಿ ॥ ೩ ॥

ನಗೆಗೇಡು ಮಾಡದಿರು ಜಗದೊಳಗೆ ಇಪ್ಪವಳ ।
ಸೊಗಸಿಗನೆ ಸರಸವಾಡುವನೆ ಬಾರೊ ॥
ಮಗುಳೆ ಮತ್ತೊಬ್ಬರು ಮೆಚ್ಚಿದರೆ ಇದಪಾಟು ।
ಮಗುಳೇನು ಹೊಸ ಪರಿಯ ತೋರುವದು ನೋಡಿದರೆ ॥೪॥

ಕಂಡೂ ಕಾಣದಹಾಗೆ ಮಾತನಾಡದಿರೆನ್ನ ।
ಅಂಡಲೆವ ಖ್ಯಾತಿ ಎಂದಿಗೆ ತೀರದು ॥

ಕುಂಡಲಿಗಿರಿವಾಸ ವಿಜಯವಿಠ್ಠಲ ವೆಂಕಟ ।
ಹಿಂಡು ಬಂಧುಗಳಿದ್ದರೇನು ಮಾನವನು ತೋರದೆ ॥ ೫ ॥

## ಆರೀಗ ನೀ ಎನ್ನ ಕಣ್ಣು ಮುಚ್ಚಿದೆಯೊ

ರಾಗ— ಮುಖಾರಿ ( ಯಮುನ ) ಆದಿತಾಳ ( ತೀನ್ ತಾಲ )

ಆರೀಗ ನೀ ಎನ್ನ ಕಣ್ಣು ಮುಚ್ಚಿದೆಯೊ ಕು- ।
ಮಾರ ಮೌನದಲಿದ್ದಿ ಮಾತನಾಡಯ್ಯಾ ॥ ಪ ॥

ಇಂದಿರಾ ಭೂದೇವಿ ಆಳಿದವನೊ ।
ನಂದ ಗೋಕುಲದಲ್ಲಿ ಪುಟ್ಟಿದವನೊ ॥
ಮಂದಿರ ವೈಕುಂಠ ಶ್ರೀನಿವಾಸನೊ ಕರಿ- ।
ಬಂಧನ ವಿನಾಶದ ವಿಠ್ಠಲನೊ ॥ ೧ ॥

ಅಂಬರೀಷನ ಶಾಪ ಪರಿಹರನೊ ।
ಶಂಭು ಮೊರೆಯಿಡಲು ಕಾಯಿದವನೊ ॥
ಕಂಭದಿಂದೊಡೆದು ಬಂದವನೊ ತ್ರಿ- ।
ಯಂಬಕನ ಭಕ್ತನ ಸಂಹರನೊ ॥ ೨ ॥

ಬೆರಳಲ್ಲಿ ಬೆಟ್ಟವನೆತ್ತಿದವನೊ ।
ದುರುಳ ಕಾಳಿಂಗನ ತುಳಿದವನೊ ॥
ಒರಳನು ಕಾಲಲ್ಲಿ ಎಳೆದವನೊ ।
ಚೆಲ್ವ ಸಿರಿವಿಜಯವಿಠ್ಠಲರಾಯನೊ ॥ ೩ ॥

## ಮೊಸರು ತಂದಿನೋ ರಂಗಾ

ರಾಗ--ಶಂಕರಾಭರಣ [ ಯಮುನ ] ಆದಿತಾಳ [ ದೀಪಚಂದಿ ]

ಮೊಸರು ತಂದಿನೊ ರಂಗಾ ಮಾರ್ಗವ ಬಿಡೊ |
ಕಿಸರು ಹೊರಲಿಬೇಡ ಕೆಲಕೆ ಸಾರೋ || ಪ ||

ಪಶುಗಾವಿ ನೀ ಎನ್ನ ಹೆಸರುಗೊಳಲಿ ಬೇಡ |
ಹಸನಾದ ಮುತ್ತಿನ ಸರಗಳು ಹರಿದಾವೊ ||
ನಿಶಿಯ ವೇಳೆಯು ಅಲ್ಲಾ ನಿನಗೆ ಬುದ್ಧಿಯು ಸಲ್ಲಾ |
ವಶಕರವಾಗುವಳೆ ಒಲವು ಇಲ್ಲದೆ || ೧ ||

ಎದೆಯ ಮುಟ್ಟಲಿ ಬೇಡ ಎಳೆನಗೆ ನಗಲಿಬೇಡ |
ಬದಿ ಬಗಲು ಪಿಡಿದು ನೋಡುವರೆ ಹೀಗೆ ||
ಕದವ ಮುಚ್ಚಿಕೊಂಡು ಕಾಕು ಎಬ್ಬಿಸುವರೆ |
ಸದನಕ್ಕೆ ಹೋಗಬೇಕು ಸರಸವೇಕೋ || ೨ ||

ಹಿಂದೆ ಬಂದವರು ಏನೆಂದು ಒಲಿದರೊ ಕಾಣೆ |
ಒಂದಿಷ್ಟು ಚೆಂದವಿಲ್ಲ ಚೆಲುವಿಕೆಯಿಲ್ಲಾ ||
ಕಂದರ್ಪಕೋಟಿ ತೇಜ ವಿಜಯವಿಠ್ಠಲ ಎನ್ನ |
ಮಂದಿರಕೆ ಬಾರೊ ನಿನ್ನ ಮನಸು ದಣಿಸುವೆ || ೩ ||

## ಆರೇನು ಮಾಡುವರು ಅವನಿಯೊಳಗೆ

ರಾಗ—ಕಾಂಬೋದಿ [ ಜೋಗಿಯಾ ] ಝಂಪೆತಾಳ [ ಝಪ್ ]

ಆರೇನು ಮಾಡುವರು ಅವನಿಯೊಳಗೆ |
ಪೂರ್ವಜನ್ಮದ ಕರ್ಮ ಫಣಿಯಲ್ಲಿ ಬರೆದುದಕೆ || ಪ ||

ಮಾಡಿದಡಗಿಯು ಕೆಡಲು ಮನಿಯ ಗಂಡನು ಬಿಡಲು |
ಕೂಡಿದ ಸತಿ ತನ್ನ ಕುಣಿಸ್ಯಾಡಲು ನಿಜದಿ ||
ಗೋಡೆಗೆ ಬರೆದ ಹುಲಿ ಘಡಘಡನೆ ತಿನಬರಲು |
ಆಡಿದ ಮಾತುಗಳ ಅಖಿಳರು ನಿಜವೆನಲು || ೧ ||

ಹೊಲ ಬೇಲಿ ಮೆಯ್ದರೆ ಮೊಲ ಇರಿಯ ಬಂದರೆ |
ತಲೆಗೆ ತನ್ನ ಕೈ ಪೆಟ್ಟು ತಾಕಿದರೆ ||
ಹೆರಳು ಹಾವಾದರೆ ಗೆಳೆಯ ರಿಪುವಾದರೆ |
ಕಲಿಸಿದ ಅವಲಕ್ಕಿ ಕಲಪರಟ ನುಂಗಿದರೆ || ೨ ||

ಹೆತ್ತ ತಾಯಿ ಹಿಡಿದು ಮಕ್ಕಳಿಗೆ ವಿಷ ಹಾಕಿದರೆ |
ಪೆತ್ತ ತಂದೆಯು ಹೊರಗೆಮಾಡಿದರೆ ||
ತೊತ್ತು ಅರಸಿಗೆ ಪ್ರತ್ಯುತ್ತರವನಾಡಿದರೆ |
ಕತ್ತಲೆ ಬೆನ್ನಟ್ಟಿ ಕರಡ್ಯಾಗಿ ಬಂದರೆ || ೩ ||

ಕಣ್ಣವೊಳಗಿನ ಗೊಂಬಿ ಕಾದಬಂದರೆ |
ಹೆಣ್ಣಿನ ಹರಟಿ ಹೆಚ್ಚಾದರೆ ||
ಅನ್ನವನು ಉಣ್ಣಲು ಅಜೀರ್ಣವಾದರೆ |
ಪುಣ್ಯ ಕ್ಷೇತ್ರಗಳಲ್ಲಿ ಪಾಪ ಅಟ್ಟಿಸಿದರೆ || ೪ ||

ಏರಿಕುಳಿತ ಕುಂಬಿ ಎರಡಾಗಿ ಮುರಿದರೆ |
ವಾರಿಧಿಗಳು ಮೇರೆ ಮೀರಿದರೆ ||
ಆರಿದ ಇದ್ದಲಿಗಳು ಅಗ್ನಿಯಾದರೆ |
ನಮ್ಮ ವಿಜಯವಿಠ್ಠಲನಿರುವತನಕ || ೫ ||

## ಮಾನಸ ಪೂಜೆಯನು ಮಾಡು

ರಾಗ—ರುದ್ರಾಭರಣ [ ಭೈರವಿ ] ಅಟತಾಳ [ ದೀಪಚಂದಿ ]

ಮಾನಸ ಪೂಜೆಯನು ಮಾಡು |
ಧ್ಯಾನಪೂರ್ವಕದಿಂದ ಕುಳಿತು || ಪ ||

ಜ್ಞಾನ ಭಕುತಿಯ ವಿಡಿದು ಲಕುಮಿ |
ಪ್ರಾಣನಾಥನ ಪ್ರೇರಣೆಯಿಂದ || ಅ. ಪ ||

ಕಾಮಕ್ರೋಧವ ಹಳಿದು ವಿಷಾದವೆಂಬೋ |
ಸ್ತೋಮಗಳನು ತೊರೆದು ರಜೋ ಮೊದಲಾದ ||
ತಾಮಸದ ಬುದ್ಧಿ ಬಿಟ್ಟು ನೇಮನಿತ್ಯ ತೀರಿಸಿಕೊಂಡು |
ಶ್ರೀಮದಾನಂದತೀರ್ಥರ ಕೋಮಲಾಂಘ್ರಿಯಲ್ಲಿ
ಈ ಮನಸು ಇಟ್ಟು || ೧ ||

ಹೃದಯಪದುಮದೊಳಗೆ ಹರಿಯ ಪದುಮಪದಗಳಿಟ್ಟು |
ದೇಹ ಕದಲದಂತೆ ಇದ್ದು ಜ್ಞಾನ ಉದಿತವಾದ ದೃಷ್ಟಿಯ ||
ಹದುಳದಿಂದ ತಿಳಿದು ಅಂತರವೆಲ್ಲವನು ನೋಡಿ |
ಕದವ ತೆರೆದು ಕೊಟ್ಟು ಮುದದಿ ದೃಢವ ಸಂಪಾದಿಸಿ || ೨ ||

ನೀಲ ರತುನದಂತೆ ಹೊಳೆವ ಪಾಲಸಾಗರತನುಜೆ |
ಮೇಲುಮಂಗಳರಮಣನಾದ ಮೇಲುಗಿರಿಯ ತಿಮ್ಮನ ||

ಲಾಲಿಯಿಂದ ತುತಿಸಿ ತವಕ ಬೀಳದಲೆ ಪೂಜೆ ವಿಧಾ |
ಸಾಲುಗಳನು ತಿಳಿದು ವಿಶಾಲಬುದ್ಧಿ ಯುಕುತಿಯಿಂದ || ೩ ||

ವೇದ ಮಂತ್ರಗಳನು ಪೇಳಿ ಆದಿಯಲ್ಲಿ ಪೀಠಪೂಜೆ- |
ಯಾದ ತರುವಾಯ ವಿನೋದದಿಂದಲಾವರಣ ||
ಆದರಣೆಯಾದ ಬಳಿಕ ಮಾಧವಂಗೆ ಸಕಲ ಭೂಷ- |
ಣಾದಿಗಳನು ರಚಿಸಿ ಪುಣ್ಯಹಾದಿಯನ್ನು ತಪ್ಪದೆ || ೪ ||

ದೋಷರಾಶಿಗೆ ದ್ವೇಷನಾಗಿ ಈ ಶರೀರವ ಘಾಸಿ ಮಾಡದೆ |
ನಾಶರಹಿತನಾದ ಹರಿಯ ಆಶಿರಸಾವಿಡಿದು ಪಾದ ||
ಲೇಸಿನಿಂದ ಭಜನೆಗೈದು ವಾಸವಾಗು ಪದದಲ್ಲಿ |
ಶ್ರೀಶ ವಿಜಯವಿಠ್ಠಲರನ್ನ ದಾಸ-ದಾಸರ ದಾಸನೆಂದು || ೫ ||

## ಅರ್ಚನೆಯು ಬಗೆ ಕೇಳಿ ಲೋಕ

ರಾಗ—ಕಾಂಬೋದಿ ( ಬಿಲಾವಲ್ ) ಝಂಪೆತಾಳ ( ಝಪ್ )

ಅರ್ಚನೆಯು ಬಗೆ ಕೇಳಿ ಲೋಕ || ಪ ||

ಕಣ್ಣುಮುಚ್ಚಿ ಕುಳಿತರೆ ಕೊಡ ಹರಿ ಮುಕ್ತಿಲೋಕಾ ||ಅ.ಪ||

ಜಡವ ಪೂಜಿಸಿದರಲ್ಲೇನೊ ತಾನು |
ಜಡ ತುಲ್ಯನಾಗಿದ್ದಕೆ ಸಮವೇನು ||
ಕೆಡದಿರು ಇದರಲಿ ತಿಳಿ ನೀನು |
ಒಡನೆ ಕರ್ಮಗಳಲ್ಲೇನುಂಟು ಕಾಣೊ || ೧ ||

ಏಕಾಂತದಲ್ಲಿ ನಿನ್ನ ಮನಸು ಅ- |
ನೇಕವಾಗುವದು ನಿರಂತರ ಗುಣಿಸು ||

ನೀ ಕೇಳು ಯೋಚಿಸಿ ಗಣಿಸು |
ಸರ್ವ ಆಕಾರದಲ್ಲಿ ಶ್ರೀಹರಿಯನ್ನೆ ನೆನೆಸು || ೨ ||

ತ್ರಿವಿಧ ಜೀವರು ಮಾಡುವಂಥ ನಡತಿ |
ಹವಣವ ನೋಡಿದು ಬಿಡು ನಿನ್ನ ಪಂಥ ||
ಕವಿಗಳೊಡನೆ ಸುಪಂಥದಿಂದ |
ಪವಮಾನಮತ ಪೊಂದಿ ಭಜಿಪುದು ಇಂಥ || ೩ ||

ದ್ವ್ಯಣುಕ ಪಿಡಿದು ಬಹುಕಾಲತನಕ |
ಎಣಿಕೆ ಮಾಡುತಲಿರು ನಿತ್ಯ ಸುಶೀಲ ||
ಗುಣವಂತನಾಗೊ ನೀ ಬಹಳ ಸುಖ- |
ವನಧಿ ರಂಗನ ವ್ಯಾಪಾರವೆನ್ನೊ ಬಾಲ || ೪ ||

ಆವಾಗ ಮರೆಯದಿರು ಹರಿಯ ಕಂಡ |
ಠಾವಿನಲಿ ಯೋಚಿಸು ಅರಗಳಿಗೆ ಬಯಸದಿರು ಸಿರಿಯ ||
ದೇವ ವಿಜಯವಿಠ್ಠಲ ಧೊರೆಯು ನಿನ್ನ |
ಭಾವದಲಿ ತಿಳಿಯೊ ಆತನ ಚರಿಯಾ || ೫ ||

## ಶುಂಠನಿಗೆ ಉಂಟೆ ವೈಕುಂಠಾ

ರಾಗ—ಕೇದಾರಗೌಳ ( ದೇಸ್ ) ಝಂಪೆತಾಳ ( ಝಪ್ )

ಶುಂಠನಿಗೆ ಉಂಟೆ ವೈಕುಂಠಾ |
ಬಂಟನಿಗೆ ಉಂಟೆ ಬಡತನವು || ಪ ||

ಕಳ್ಳನಿಗೆ ಉಂಟೆ ಪರರು ಒಡವೆಗಳಿಸಿದ ಕಷ್ಟ |
ಸುಳ್ಳನಿಗೆ ಉಂಟೆ ಮಿತಿಯಾದ ಭಾಷೆ ||
ಕೊಲ್ಲುವನಿಗೆ ಉಂಟೆ ದಯಾದಾಕ್ಷಿಣ್ಯದ ಮಾತು |
ಕ್ಷುಲ್ಲಕನಿಗೆ ಉಂಟೆ ಗುಣ ಭಾರಿ ಬುದ್ಧಿಗಳು || ೧ ||

ಉಪವಾಸಿಗೆ ಉಂಟೆ ಅನ್ನ-ಆಹಾರದ ಚಿಂತೆ |
ತಪಸಿಗೆ ಉಂಟೆ ಇಹದ ವ್ಯಾಕುಲ ||
ಕೃಪಣನಿಗೆ ಉಂಟೆ ದಾನ-ಧರ್ಮದ ಚಿಂತೆ |
ಚಪಳ ನಾರಿಗೆ ಉಂಟೆ ತನ್ನ ಮನೆವಾರ್ತೆ || ೨ ||

ಕ್ಷುಧಾತುರಗೆ ಉಂಟೆ ಪಾಕಾದಿ ಫಲ ರುಚಿ |
ಹಾದಿಬಿಟ್ಟವಗುಂಟೆ ಮನದ ಧೈರ್ಯ ||
ವೇದನೆ ಬಡುವಗುಂಟೆ ಅಣ್ಣಿಗರ ಸಂಧಾನ |
ಕ್ರೋಧದವಗುಂಟೆ ಬಲು ಶಾಂತ ನೀತಿ || ೩ ||

ಕಾಮಾತುರಗೆ ಉಂಟೆ ಭವತುರಿತ ಲಜ್ಜೆಗಳು |
ನೇಮ-ನಿತ್ಯಗೆ ಉಂಟೆ ಮನದ ರೋಗ ||
ಹೇಮಾತುರಗೆ ಉಂಟೆ ಗುರುಬಾಂಧವ ಸ್ನೇಹ |
ತಾಮಸಿಗೆ ಉಂಟೆ ಶುಭಕರ್ಮ ಸದ್ಭಕ್ತಿ || ೪ ||

ದಾನಿಗೆ ಉಂಟೆ ಇಂದಿಗೆ ನಾಳಿಗೆಂಬೋದು |
ಜ್ಞಾನಿಗೆ ಹತ್ಯಾದಿ ದೋಷ ಉಂಟೆ ||
ಆನಂದಾನಂದಿ ಸಿರಿ ವಿಜಯವಿಠಲಸ್ವಾಮಿಯ |
ಧೇನಿಸುವಗುಂಟೆ ದಾರಿದ್ರ್ಯ ದುಷ್ಕರ್ಮ || ೫ ||

## ನೆಚ್ಚಬೇಡಿ ಪತಿತ ನಾರಿಯ

ರಾಗ—ಪಂತುವರಾಳಿ ( ಸಾರಂಗ ) ಅಟತಾಳ ( ದೀಪಚಂದಿ )

ನೆಚ್ಚಬೇಡಿ ಪತಿತ ನಾರಿಯ |
ಕಚ್ಚುವ ಹಾವಿನ ಸಂಗವೆನ್ನಿ || ಪ ||

ಮೆಚ್ಚುಗೊಳಿಪಳು ಗುಣಿಸಿ ನೋಡಿ ||
ನಿಚ್ಚದಲಿ ಚಿತ್ತಚಂಚಲಳಾಗಿ || ಅ. ಪ ||

ಯುವ ತನಗೆ ಬರುವ ಪರಿಯಂತ |
ಯಾವದನಿತು ಮೊಗವನೆತ್ತದಲೆ ||
ಏವೆ ತೆಗೆದು ದಿಕ್ಕುಗಳ ನೋಡದೆ |
ಅವನಿಗೆ ಬಾಗಿ ನಡೆಯುತ ||
ತವರು ಮನೆಯವರನು ಹಳಿದು |
ನವನವ ಪ್ರಾವರ್ತನವನು ತೋರುತ ||
ಅವಗುಣಂಗಳಿಲ್ಲದೋಪಾದಿಲಿ |
ಲವಕಾಲವನು ಕಳೆವ ನಾರಿಯು || ೧ ||

ಪ್ರಾಯಾವಸ್ಥೆ ಬಂದು ಪ್ರಾಪ್ತವಾಗಲು |
ಆಯತಾಕ್ಷಿಗಳ ತಿರುಹಿ ಮೆಲ್ಲನೆ ||
ಬಾಯಲ್ಲಿ ಒಂದೊಂದು ಕ್ರಮಾಸಾರದಿ |
ನೋಯ ನೋಯದಂತೆ ವಚನವ ||
ದಾಯಿಗಳಂತೆ ಮತ್ಸರಿಸಿ ಬಯ್ಯದೆ |
ಮಾಯಾವಿ ಕಲ್ಪಿಸಿ ಮುಸಿಮುಸಿ ನಗೆ ||
ಆಯಕೆ ತಗಲಿ ಕಂಡ ಜನರಿಗೆ |
ಛಾಯ ಕಾಣಿಸದಂತೆ ಮಾಳ್ಪಳ || ೨ ||

ಅತ್ತೆ ಮಾವಗೆ ಅತ್ಯಂತವಾಗಿ ತಾನು |
ಪ್ರತಿ ಉತ್ತರ ಪೇಳಲು ಅಂಜಿ ಅಂಜಿದಂತೆ ||
ಉತ್ತಮರ ಮನೋರಥವ ಕೆಡಿಸಿ |
ಅತ್ತಿಗಿ ನಾದುನಿ ಮಿಗಿಲಾದವರೆಲ್ಲ ||

ಕತ್ತೆನಾಯಿ ನರಿಯೆಂಬೊ ಸೊಲ್ಲಲ್ಲಾದೆ |
ಎತ್ತಲಾದರು ವಂಚಿಸಿ ಗಂಡನ್ನ ||
ತನ್ನಂತೆ ಮಾಡಿಕೊಂಡು ಹಗಲಿರುಳು ಥೈ- |
ತಥ್ಥಾ ಎಂದಾಡಿಸಿ ಕುಣಿಸುವ ಸತಿಯಳ || ೩ ||

ಮಿಥುನಭಾವಕೆ ಕೊಂಡ ತೆರದಿ |
ಪತಿಯ ಸಮಯ ನೋಡದೆ ತಾನು ||
ಸಥೆಯಿಂದಲಿ ಸಂಸಾರದೊಳಗಿದ್ದು |
ಸುತರ ಪಡೆದು ಹಮ್ಮಿಲಿ ||
ಕಥನವೆಬ್ಬಿಸಿ ಗಂಡನ್ನ ಅಡವಿ |
ಪಥವ ಹಿಡಿಸಿ ಹಣದಗೋಸುಗ ||
ಸತತ ಮನೆಯೊಳಗಿದ್ದ ಬದುಕು |
ಮಿತಿಯಿಲ್ಲದೆ ಭಕ್ಷಿಸುವ ನಾರಿಯ || ೪ ||

ಒಲಿಪಗೆ ನೀವು ಮೋಸಗೊಂಡು |
ಒಲಿಯದಿರಿ ಸ್ತ್ರೀಯರಿಗೆ ಸೋತು ||
ಕಲಿಗೆ ಪ್ರಥಮ ಪಟ್ಟದ ಗದ್ದಿಗೆ |
ಸುಲಭವಲ್ಲವೋ ಸುಖವಿಲ್ಲಾ ||
ಕೆಲಕಾಲ ಮಹಾ ಕಾತುರದಿಂದಲಿ |
ವಳಗಾಗದಿರು ಒಳಿತು ಪೇಳುವೆ ||
ಜಲಜಾಕ್ಷ ವಿಜಯವಿಠ್ಠಲನ್ನ ನಂಬಿರೊ |
ನಂಬಿರೋ ನಂಬಿರೋ ಚತುರರು || ೫ ||

## ನಾಡದೈವಗಳ ಪೂಜೆಯನು ಮಾಡಿದರೆ

ರಾಗ—ಕೇದಾರಗೌಳ [ ಭೀಮಪಲಾಸ ] ಝಂಪೆತಾಳ [ ಝಪ್ ]

ನಾಡದೈವಗಳ ಪೂಜೆಯನು ಮಾಡಿದರೆ |
ಕೇಡಲ್ಲದೆ ಮತ್ತೆ ಕೈವಲ್ಯವುಂಟೇ || ಪ ||

ಕೊಳಚೆ ನೀರನು ದಾಟಲರಿಯದ ಮನುಜಗೆ |
ನಿಲುವುದ್ದ ದ್ರವ್ಯ ಕೊಡುವೆ ಎನ್ನನಾ- |
ಜಲನಿಧಿಯ ಉತ್ತರಿಸಿಕೊಡು ಎಂದರೆ ಅವನು |
ಅಳಿಯದಂತೆ ದಡಕೆ ತರಬಲ್ಲನೇ || ೧ ||

ಕತ್ತಲೆಗಂಜುವನ ಕರೆತಂದು ಶೃಂಗರಿಸಿ |
ಉತ್ತಮದ ವಾಜಿ ವಾಹನವ ಮಾಡಿ ||
ಕತ್ತಿಯನು ಕರದಲ್ಲಿ ಕೊಟ್ಟು ರಿಪುಪರಿವಾರ- |
ದತ್ತ ಒಂದಡಿಯಿಟ್ಟು ಬರಬಲ್ಲನೇ || ೨ ||

ತನಗೆ ಬಂದಾಪತ್ತು ಪರಿಹರಿಸಿಕೊಳ್ಳದೆ ಪರ- |
ಮನವಿಡಿದು ಭಜಿಸಿದರೆ ಏನಾಗದೊ ||
ಬಿನಗು ದೈವರಗಂಡ ಶ್ರೀವಿಜಯವಿಠ್ಠಲನ |
ವನಜಪದ ನೆನೆದರೆ ಮುಕುತಿಯುಂಟು || ೩ ||

## ಡಂಗುರ ಹೊಯಿಸಿದ ಯಮನು

ರಾಗ--ಪಂತುವರಾಳಿ [ ಪೀಲು ] ಅಟತಾಳ [ ದೀಪಚಂದಿ ]

ಡಂಗುರ ಹೊಯಿಸಿದ ಯಮನು |
ಪಾಪಿ ಹೆಂಗಳೆಯರ ತಂದು ಭಂಗಪಡಿಸಿರೆಂದು || ಪ ||

ಮೃತ್ತಿಕೆ ಶೌಚವ ಗಂಧ ಪೋಗುವಂತೆ |
ನಿತ್ಯದಲ್ಲಿ ಸ್ನಾನ ಮಾಡದೆ ಸುಮ್ಮನೆ ||
ತೊತ್ತುಬಡಿಕೆಯಾಗಿ ಮುಖವ ತೊಳೆಯದಿಪ್ಪ |
ಕತ್ತೆ ಹೆಂಗಸರನು ಕಡಿದು ಕೊಲ್ಲಿರೋ ಎಂದು || ೧ ||

ಪತಿಗೆರಗದೆ ಗೃಹಕೃತ್ಯ ಮಾಡುವಳ |
ಮತಿ ಏಕವಿರದೆ ಚಂಚಲದಿಪ್ಪಳ ||
ವ್ರತಗೇಡಿ ಅನ್ಯರ ಮಾತಿಗೆ ಸೋಲುವ |
ಪತಿತಳ ಎಳೆತಂದು ಹತವ ಮಾಡಿರೆಂದು || ೨ ||

ಒಬ್ಬರಿಬ್ಬರ ಕೂಡ ಸಖತನ ಮಾಡುವಳ |
ಒಬ್ಬೊಬ್ಬರಿಗೆ ಮೆಯ್ಯಿತ್ತು ಪಾಡುವಳ ||
ಅಬ್ಬರದ ಸೊಲ್ಲನು ವಿಸ್ತರಿಸುವಳ |
ದಬ್ಬಿರೋ ವೃಶ್ಚಿಕದ ಕುಂಡದೊಳಗೆ ಎಂದು || ೩ ||

ವಸನವಿಲ್ಲದೆ ಮೈಯ ತೊಳಕೊಂಬೊ ಪಾಪಿಯ |
ಹಸಿವೆಯಾದರೆ ಮಲಗಿಕೊಂಡಿಪ್ಪಳ ||
ಅಶನ ಭಕ್ಷಿಸುವಾಗ ಅಳಲುವ ದುಃಖಿಯ |
ಪೆಸರಿಯ ತಲೆ ಕೆಳಗಾಗಿ ಬಾಧಿಸಿರೆಂದು || ೪ ||

ಬಿಗಿದು ಪುಟವ ಹಾಕಿ ಬದಿಬಗಲ ಮುಚ್ಚದೆ |
ನಗುವಳು ಅವರಿವರೆಂದರಿಯದೆ ||
ಬಗೆಬಗೆ ವಯ್ಯಾರ ನಿಜವಾಗಿ ತೋರುವ |
ಅಧಮ ನಾರಿಯ ತಂದು ಅರಿದು ಕೊಲ್ಲಿರೊ ಎಂದು || ೫ ||

ಪಾಕದ ಪದಾರ್ಥ ನೋಡಿ ಇಡದವಳ |
ಲೋಕವಾರ್ತೆಗೆ ಮನೆಯ ಜರಿದು ಪತಿಗೆ ||
ಬೇಕಾದವರ ಜರಿದು ಬಹುಪುಷ್ಪ ಮುಡಿದಿಪ್ಪ |
ಶಾಕಿಯ ಎಳೆತಂದು ಕಣ್ಣು ಕಳಚಿರೆಂದು || ೬ ||

ಪಂಕ್ತಿ ಭೇದವ ಮಾಡಿ ಬಡಿಸುವ ಪಾಪಿಯ |
ಕಾಂತ ಕರೆದಾಗ ಪೋಗದವಳ ||
ಸಂತರ ನೋಡಿ ಸೈರಿಸದಿಪ್ಪ ನಾರಿಯ |
ದಂತಿಯ ಕೆಳಗೆ ಹಾಕಿ ತುಳಿಸಿ ಕೊಲ್ಲಿರೊ ಎಂದು || ೭ ||

ವಿಧವೆಯ ಸಂಗಡ ಇರುಳು-ಹಗಲು ಇದ್ದು |
ರದನ ತೆರೆದು ನೆರಳು ನೋಡುವಳ ||
ಕದದ ಮುಂದೆ ಕುಳಿತು ತಲೆ ಬಾಚಿಕೊಂಬುವಳ |
ಕುದಿಸಿ ಕಟಾಹದೊಳು ಮೆಟ್ಟಿ ಸೀಳಿರೊ ಎಂದು || ೮ ||

ಆವದಾದರು ತೊರೆದು ಪತಿದೈವವೆಂದರಿದು |
ಸೇವೆಯ ಮಾಡಿ ಸುಜನರಿಗೆ ಬೇಗ ||
ದೇವೇಶ ವಿಜಯವಿಠ್ಠಲ ತಿರುವೆಂಗಳ |
ಕಾಯುವನು ದಯದಿಂದ ಕೈವಲ್ಯ ಕಲ್ಪಿಸಿ || ೯ ||

## ಸಲ್ಲದೊ-ಸಲ್ಲದೊ ಸರ್ವರು ಕೇಳಿ

ರಾಗ—ಕಾಂಬೋದಿ ( ಮಾಲಕಂಸ ) ಝಂಪೆತಾಳ ( ಝಪ್ )

ಸಲ್ಲದೊ ಸಲ್ಲದೊ ಸರ್ವರು ಕೇಳಿ ನಮ್ಮ |
ಫುಲ್ಲನಾಭನ ಬಿಟ್ಟು ಖುಲ್ಲದೇವರ ಪೂಜೆ || ಪ ||

ಮಾರಿ ಮಸಣಿ ಜೆಟ್ಟಿ ಜೆಟ್ಟಿಂಗ ಬೇತಾಳ |
ವರ ಪೋತರಾಜಾ ಬೊಮ್ಮಯನು ||
ಬೀರೆ ದ್ಯಾವರು ಹಾದಿ ಬೀದಿಯ ಬಸವಣ್ಣ |
ಚಾರುದೈವ ಉಚ್ಚಾರವಲ್ಲದೆ ಹೊಲ್ಲಾ || ೧ ||

ಯಲ್ಲಮ್ಮ ಯಕನಾತಿ ಆಡವಿಯ ಗಿಡದಮ್ಮ |
ಹಳ್ಳದ ತೀರದ ಹಾಳದೇವಿ ಅಮ್ಮ ||
ಜಲದೇವಿ ಜಕ್ಕಮ್ಮನೆಂತೆನಲು |
ಸೊಲ್ಲು ಬರಿದೆ ವ್ಯರ್ಥವಲ್ಲದೆ ಫಲವಿಲ್ಲ || ೨ ||

ಬನದಶಂಕರಿ ಕುಳ್ಳಹಟ್ಟಿಗೆ ಕರಿಮಾತಿ |
ವನಶಕ್ತಿ ಚವಡಮ್ಮನು ಜವನಿಕೆ ||
ಬಿನಗು ಮಾಳಾದೇವಿ ಮಾಳಿಗೆ ಹಿರಿಯಕ್ಕ |
ಘನ ಪಿಶಾಚಿಗಳಿಂದ ಒಂದಿಷ್ಟು ಸುಖವಿಲ್ಲ || ೩ ||

ಖಂಡೇರಾಯಾ ಮಲಕಚ್ಚಿನ ಗಡಿಗೆಮ್ಮ |
ಮುಂಡೆ ಮೂಕಾರುತಿ ಚೆಂಡೆಮ್ಮನು ||
ಭಾಂಡಾರದ ದುರ್ಗಿ ಹಿರಿಯಣ್ಣ ಮೈಲಾರ |
ಹಿಂಡುಗುಂಪಿನ ಬಳಗ ಕಂಡರೇಸಿಲ್ಲ || ೪ ||

ಸುಣ್ಣದ ಕೆಸರು ಹಾಲು ಕೂಡಿ ಕುಡಿದಂತೆ |
ಅನ್ಯ ದೇವತೆಗಳ ಭಜನೆ ಹೊಲ್ಲಾ ||
ಚೆನ್ನಾಗಿ ಸಿರಿ ವಿಜಯವಿಠ್ಠಲನ ಯುಗಳ ಪಾದ |
ಸನ್ನುತಿಸಿದರೆ ಪರಮಪದವಿಯಕ್ಕು || ೫ ||

## ಹರಿದಾಸನಾದರೆ ಹ್ಯಾಗಿರಲಿಬೇಕು

ರಾಗ— ಕಾಂಬೋದಿ [ ಕಾಫಿ ] ಝಂಪೆತಾಳ [ ತೀನ್ ತಾಲ ]

ಹರಿದಾಸನಾದರೆ ಹ್ಯಾಗಿರಲಿಬೇಕು
ನರಲೋಕದ ಚಿಂತೆ ಬಿಟ್ಟುಕೊಡಬೇಕು || ಪ ||

ಇಂದು ನಾಳೆಂಬ ಯೋಚನೆಯ ಬಿಡಬೇಕು |
ಇಂದ್ರಿಯಗಳನೆಲ್ಲ ನಿಗ್ರಹಿಸಬೇಕು ||
ಬಂದದ್ದೆಲ್ಲ ಬರಲಿ ಈಗಲೇ ಎನಬೇಕು
ಅಂದವರು ಎನಗೆ ಬಂಧುಗಳು ಎನಬೇಕು || ೧ ||

ಸ್ನಾನವನು ಬಿಟ್ಟು ಹರಿಕಥೆಯ ಕೇಳಲಿಬೇಕು |
ದಾನಕ್ಕೆ ಸರ್ವೋಗನಾಗಬೇಕು ||
ಮಾನಾಪಮಾನಕ್ಕೆ ಹರಿ ತಾನೆ ಎನಬೇಕು |
ಏನಾದರಾಗಲಿ ಸುಖಪಡಲಿಬೇಕು || ೨ ||

ಇರುಳು-ಹಗಲು ಹರಿಸ್ಮರಣೆ ಮಾಡಲಿಬೇಕು |
ಪರಲೋಕದ ಗತಿ ಬಯಸಬೇಕು ||
ಗುರು-ಹಿರಿಯರಿಗೆ ವಂದನೆಯ ಮಾಡಲಿಬೇಕು |
ದುರುಳನ ಕಂಡರೆ ದೂರಾಗಬೇಕು || ೩ ||

ತಾವರೆಮಣಿ ತುಲಸಿಸರವ ಧರಿಸಲಿಬೇಕು |
ಭಾವಶುದ್ಧನಾಗಿ ತಿರುಗಬೇಕು ||
ಕೋವಿದರ ಸಂಗಡ ಕೂಡಾಡುತಿರಬೇಕು |
ಪಾವಕನಂತೆ ಇಂಪನು ಕಾಣಬೇಕು || ೪ ||

ಅನ್ನಪಾನಗಳಿಗವಸರ ಬೀಳದಿರಬೇಕು |
ಕಣ್ಣಿದ್ದು ಕುರುಡನೆಂದೆನಿಸಬೇಕು ||
ಚೆನ್ನಾಗಿ ವಾಯುಮತದಿ ಲೋಲಾಡಬೇಕು |
ತನ್ನೊಳಗೆ ತಾ ತಿಳಿದು ನಗುತಲಿರಬೇಕು || ೫ ||

ಬಿಂಬ ಮೂರುತಿಯ ಹೃದಯದಲಿ ನಿಲ್ಲಿಸಬೇಕು |
ಡಂಭಕ ಭಕುತಿಯನು ಜರಿಯಬೇಕು ||

ಡಿಂಭವನು ದಂಡಿಸಿ ವ್ರತವ ಚರಿಸಲಿಬೇಕು |
ನಂಬಿ ನರಹರಿ ಪಾದವನುತ ಸಾರಲಿಬೇಕು ‖ ೬ ‖

ಹರಿಯಲ್ಲದನ್ಯತ್ರ ದೈವವಿಲ್ಲೆನಬೇಕು |
ಮರುತನೆ ಜಗಕೆ ಗುರುವೆನಲಿಬೇಕು ‖
ಪುರಂದರದಾಸರೆ ದಾಸರೆಂದೆನಬೇಕು |
ಸಿರಿ ವಿಜಯವಿಠ್ಠಲನ ಸ್ಮರಣೆ ಮಾಡಲಿಬೇಕು ‖ ೭ ‖

## ಬಿಡು-ಬಿಡು ಮಾಯವನು

ರಾಗ—ಶಂಕರಾಭರಣ ( ಕಾಫಿ ) ಏಕತಾಳ ( ಕಹರವಾ )

ಬಿಡುಬಿಡು ಮಾಯವನು ಕೆಡದಿರು ಕಪಟದಲಿ |
ನಡಿ ನಡಿ ಸುಪಥವ ಜಗದೊಡೆಯನ ನೆನೆ ಮನವೆ ‖ ಪ ‖

ನಾನು ನನ್ನದು ಎಂಬೊ ಹೀನವಚನ ಸಲ್ಲ |
ಗೇಣುದರವಲ್ಲದೆ ಪೊರೆವದು ಮತ್ತೇನಾದರು ಉಂಟೆ ‖ ೧ ‖

ಮಡದಿ-ಮಕ್ಕಳ ನೋಡಿ ಕಡುಹಿಗ್ಗಿ ಕೆಡಬೇಡ |
ಕಡು ಮುನಿದೆಮನಾಳುಗಳು ಪಿಡಿದೆಳೆದೊಯ್ವಾಗ ‖ ೨ ‖

ಇರುಳು-ಹಗಲು ನೀನು ಹರಿಸ್ಮರಣೆ ಚಿತ್ತದಲಿ |
ಸ್ಥಿರವಾಗಿ ಇರಿಸೋದು ಅನಂತ ಜನ್ಮಾಂತರ
ಪಾಪ ಪೋಗುವದು ‖ ೩ ‖

ಜ್ಞಾನಮಾರ್ಗವಿಡಿದು ಆನಂದಮೂರುತಿಯ ಧ್ಯಾನದಿಂದಲಿ |
ಕಾಣು ದೈನ್ಯವೃತ್ತಿಯ ಬಿಟ್ಟು ಹಾನಿ ವೃದ್ಧಿಯ ಜರಿದು ‖ ೪ ‖

ಅತಿ ಕಾಮಾತುರನಾಗಿ ರತಿಯಲ್ಲಿ ಸಿಗದಿರು |
ಸತತ ಮಾಡಿದ ಕರ್ಮ ವ್ಯಾಳೆವ್ಯಾಳೆಗೆ ಶ್ರೀಪತಿಗರ್ಪಿತವೆನ್ನು || ೫ ||

ಸಂತೋಷಗಳು ಬರಲಿ ಸಂತಾಪಗಳು ಇರಲಿ |
ಇಂತು ಇವರಿಗೆಲ್ಲ ಪ್ರೇರಕ ಹರಿ ಜಗದಂತರ್ಯಾಮಿ || ೬ ||

ಧನ-ಕನಕ ವಸ್ತು ಮಾನಿನಿ ನಂದನರು ಆರು ? |
ತನುವೆ ನಿನ್ನದಲ್ಲ ತಿಳಿದುಕೊ ಗತಿ ಸಾಧನಕೆ ವಿಜಯವಿಠ್ಠಲ || ೭ ||

೧.

## ಉಡುಪಿ ಕೃಷ್ಣನ ವರ್ಣನೆ

ಧ್ರುವತಾಳ

ಅಣುಮೂರುತಿ ಪರಮಾಣುಮೂರುತಿ ಇದೇ |
ಘನಮೂರುತಿ ಮಹಾಘನ ಮೂರುತಿ |
ತೃಣಕಾಷ್ಠ ಮೊದಲಾದ ಪರಿಪೂರ್ಣ ಮೂರುತಿ |
ಗುಣತ್ರಯಾತ್ಮಕವಾದ ಗುಣವಂತ ಮೂರುತಿ |
ಮನುಜೋತ್ತಮರವಿಡಿದು ವನಜಭವಾದ್ಯರ |
ಮನಕೆ ಪೊಳೆವ ಮೂರುತಿ ಚಿನುಮಯ ಮೂರುತಿ |
ದನುಜಕುಲಕೆ ದಲ್ಲಣನಾದ ಮೂರುತಿ |
ರಣದೊಳಗರ್ಜುನನ ತನು ಉಳುಹಿದ ಮೂರುತಿ |
ಕ್ಷಣವಗಲದೆ ಜೀವನ ಕೂಡಲಿಪ್ಪುದಿದೆ |
ಅನಿರುದ್ಧ ಮೂರುತಿ ಅಚ್ಯುತಮೂರುತಿ |
ಜನನಿ ಗೋಪಿಯು ಮುಂದೆ ಒರಳು ಕಟ್ಟುವಾಗ |
ಕುಣಿದ ಮೂರುತಿ ಮಧ್ವಮುನಿಗೊಲಿದ ಉಡು- |
ಪಿಯ ವಾಸ ಸಿರಿಕೃಷ್ಣಯ್ಯನ ಮೂರುತಿ |
ವಿಜಯವಿಠ್ಠಲನಿರುತಿಪ್ಪ ||

ಮಟ್ಟತಾಳ

ದ್ವಾರಾವತಿಯೆತ್ತ ಪಡುವಲದಿಕ್ಕಿನ |
ವಾರಿನಿಧಿಯೆತ್ತ ಗೋಪೀಚಂದನವೆತ್ತ |
ಮಾರಾಟದ ಹಡಗ ಪೋಗಿಬರುವುದೆತ್ತ |
ಭಾರತಿಪತಿಯಾದ ಮಧ್ವಮುನಿಯೆತ್ತ |
ಈ ರೀತಿ ಸಂಗತಿಯೆತ್ತ ಅವಲ್ಲಿ ಕಲ್ಪಿಸಿ |

ತೋರಿದೆಯೋ ದೇವ ।
ಆರು ಬಲ್ಲರು ನಿನ್ನ ಮಹಾವಿಚಿತ್ರವ ।
ಸಾರಲಾಪೆನೇ ನಿತ್ಯ ಉಡುಪಿಯ ಸಿರಿಕೃಷ್ಣ ।
ಜಾರ ಚೋರ ನಮ್ಮ ವಿಜಯವಿಠ್ಠಲರೇಯ ।
ದ್ವಾರಾವತಿಯೆತ್ತ ಪಡುವಲದಿಕ್ಕೆತ್ತ ॥

ತ್ರಿಪುಟತಾಳ

ಅಂದು ದೇವಕಿದೇವಿ ದ್ವಾರಕಾಪುರದಲ್ಲಿ ।
ಒಂದು ದಿವಸ ನಿನ್ನ ಮಾಯೆ ಮುಸುಗೆ ।
ಕಂದ ನೀನಾಗಿ ಗೋಕುಲದಲ್ಲಿ ಗೋಪಿಯ ।
ಮುಂದೆ ಬಾಲಕನಾಗಿ ತೋರಿದಾಟ ।
ಒಂದಾದರು ನೋಡಿ ದಣಿಯಲಿಲ್ಲವು ಮನಸು ।
ಎಂದೆನೆ ಜನನಿಯ ಮಾತು ಕೇಳಿ ।
ನಂದನನಾಗಿ ತೋರುವೆನೆಂದು ನೆನೆದು ಗೋ- ।
ವಿಂದನು ಗೋಪಳ್ಳಿಯಲಿ ನಲಿದದ್ದು ।
ಒಂದೊಂದು ತೋರುತ್ತ ಬರಲದರೊಳಗಿದೆ ।
ಚಂದವಾದ ರೂಪ ಮನಕೆ ಪೊಳೆಯೆ ।
ನಿಂದಿರ ಪೇಳಿ ಮಗನ ಮುದ್ದಾಡಿ ನೋಡಿ ।
ತಂದೆ ಈ ರೂಪದಲ್ಲಿ ಭೂಮಿಯೊಳಗೆ ।
ಕುಂದದರ್ಶನೆಗೊಂಡು ಕೀರ್ತಿ ಮೆರೆವುದೆಂದು ।
ಮಂದಹಾಸದಲಿ ಪೇಳಲು ಕೈಕೊಂಡು ।
ಒಂದು ಕೈಯಲಿ ಕಡಗೋಲ ಪಿಡಿದು ಮ- ।
ತ್ತೊಂದು ಕೈಯಲಿ ನೇಣ ಧರಿಸಿ ಬಾಲ- ।
ನಂದದಿ ಇರಲಿತ್ತ ಭೈಷ್ಮಿ ವಿಶ್ವಕರ್ಮ- ।
ನಿಂದ ಅದರಂತೆ ರಚಿಸಹೇಳಿ ನಂದ- ।
ದಿಂದಲಿ ತನ್ನ ಮೂಗುತಿಯನು ಇಟ್ಟು ।

ಸುಂದರ ವಿಗ್ರಹನೊಡನಾಡುತ್ತ |
ಇಂದಿರೆ ಇರೆ ಇತ್ತ ಕಲಿಯುಗ ಬರೆ ಗೋಪಿ- |
ಚಂದನದೊಳು ನಿನ್ನ ಅಡಗಿಸಲು |
ಸಿಂಧುವಿನೊಳಗೊಬ್ಬ ಹಡಗದ ವಶಕ್ಕೆ !
ತಂದಿರೆ ತವಕದಿಂದಲಿ ಅಲ್ಲಿಂದ |
ನಂದತೀರ್ಥರಿಗೊಲಿದ ಉಡುಪಿಯ ಸಿರಿಕೃಷ್ಣ |
ಕಂದರ್ಪಪಿತ ನಮ್ಮ ವಿಜಯವಿಠ್ಠಲರೇಯಾ ||

ಅಟತಾಳ

ಈ ಉಡುಪಿಯ ಯಾತ್ರೆ ವೈಕುಂಠದ ಯಾತ್ರೆ |
ಆವ ಮನುಜನು ಸೇವಿಸಲು ದುರಿತವನ- |
ದಾವನ ಪಾವನ ಮಾಡುವ ಯಾವತ್ತು ಜನುಮದ |
ನೋವು ಕಳೆದು ತನ್ನ ಸೇವೆಯೊಳಿಟ್ಟು ಅ- |
ಪವರ್ಗ ಕೊಡುವನು ದೇವಕಿನಂದನ ಕೃಷ್ಣಮೂರ್ತಿ ಕರು- |
ಣಾವಾರಿಧಿ ನಮ್ಮ ವಿಜಯವಿಠ್ಠಲರೇಯ |
ಜೀವೋತ್ತಮ ಮಧ್ವಮುನಿ ಮನೆದೈವವೇ ||

ಆದಿತಾಳ

ಇದೆ ಜನ್ಮ ಸಾರ್ಥಕ ಇದೆ ಸರ್ವಕಾರ್ಯಸಿದ್ಧಿ |
ಇದೆ ಕುಲಕೋಟಿ ಉದ್ಧಾರ ಇದಕಿಂತಧಿಕವಿಲ್ಲ |
ಇದಕೆ ಸಮಾನವಿಲ್ಲ ಇದೆ ಮುಖ್ಯ ಯಾತ್ರೆಯೆನ್ನಿ |
ಇದೆ ಇದೆ ಸಿದ್ಧ ಯದುಕುಲೇಶನ ದಿವ್ಯ |
ಪದಗಳ ಒಮ್ಮೆ ನೋಡೆ ಪದವಿಗೆ ಸೋಪಾನ |

ಮುದದಿಂದ ಸ್ಥಿರವಹುದು ಪದವುಲಾ- |
ನಂದವುಸಿಗೊಲಿದು ಮುದ್ದುಕೃಷ್ಣನೆ ಸು- |
ಹೃದಯರಾಮನಿವಾಸ ವಿಜಯವಿಠಲ ಪಡುವಲ |
ಉದಧಿಲಿ ಕದಲಿಪ್ಪ ಇದೆ ದ್ವಾರಕೆಯೆಂದು ||

ಜತೆ

ಮಧ್ವಸರೋವರ ಸ್ನಾನ ಕೃಷ್ಣನ ಧ್ಯಾನ |
ಶುದ್ಧನಾಗಿ ಮಾಡೆ ವಿಜಯವಿಠಲ ಕಾವ ||

೨

## ವೆಂಕಟೇಶನ ಪ್ರಾರ್ಥನೆ

ಧ್ರುವತಾಳ

ಮೀನನಾಗಿ ಕಮಠನಾಗಿ ಸೂಕರನಾಗಿ |
ಮಾನವ ಮತ್ತು ಸಿಂಗನಾಗಿ ದಾನ ಬೇಡುವನಾಗಿ |
ಇವನೆ ಈವನಾಗಿ ಕಾನನವಾಸಿಯಾಗಿ |
ಗೊಲ್ಲನಾಗಿ ದಿಗಂಬರನಾಗಿ ರಾವುತನಾಗಿ ತಿರಿಗಿ ತಿರಿಗಿ |
ನಾನಿಪ್ಪ ಬಲು ಜನುಮ ಧರಿಸಿ ಬಿಡದೆ ಈವಾಗ ಗಿರಿಯಲ್ಲಿ |
ನಿನ್ನ ಸೇವೆಗೋಸುಗ ಜ್ಞಾನಪೂರ್ವಕದಿಂದ ಸಂಚರಿಸುವೆ |
ಶ್ರೀನಾಥ ಭೂನಾಥ ಸುರನಾಥ ಜಗನ್ನಾಥ |
ದೀನಬಾಂಧವ ದಾನವಸೂದನ |
ಏನೆಂಬೆನಯ್ಯ ಎನಗಿದನೆ ಕರುಣಿಪುದು |
ನಾನಿದರ ವಿನಾ ವರವೆಗ್ಗಳ ಧ್ಯಾನದಲ್ಲಿ ಬಿಡೆನೊ |

ನಿನ್ನ ಪಾದವೆ ಸಾಕ್ಷಿ ಹಾನಿ ವೃದ್ಧಿ ಅಂಬುವದೆಲ್ಲ |
ನೀನೆ ತಂದೀಯದಲೆ ತನಗೆ ತಾನೆ ಬಾರವು |
ಆ ನಿರ್ಜರಾದ್ಯರಿಗೆ ಒಮ್ಮೆಯಾದರೂ |
ಧೇನು ಕರೆಯದೆ ಬಂದು ಬಾಯೊಳಗೆ ಪಾಲು |
ತಾನಾಗಿ ಕರೆಯುತ್ತಿದೆ ಗುಟಕರಿಸದೆ |
ಓಣಿಯೊಳಗೆ ಪರಿವ ಕುಚ್ಚಿತೋದಕ ಬಯಸಿ |
ಪಾಣಿಯಲ್ಲಿ ಪಿಡಿದು ಕುಡಿದ ಮಂದ |
ಮಾನವನಾಗದಕೆ ನಿನ್ನ ದಾಸರ ಚರಣ- |
ರೇಣು ಸೋಕಿದ ಮೇಲೆ ಎಂದಾದರು |
ಶ್ರೀನಿವಾಸಾದ್ರಿವಾಸ ವಿಜಯವಿಠಲ ವೆಂಕಟ |
ಪ್ರಾಣನಾಗಿಪ್ಪ ಪ್ರಿಯಂಗೆ ಪ್ರಿಯ |

ಮಟ್ಟತಾಳ

ಆವಾವ ಜನ್ಮಂಗಳು ಬಂದರಾದಡೆ ನಿನ್ನ |
ಸೇವೆಯೊಳಗಿಪ್ಪ ಜ್ಞಾನವೇ ಪಾಲಿಪುದು |
ಪೂವು ಫಲ ಮಿಕ್ಕ ದ್ರವ್ಯಂಗಳಿಂದಲಿ |
ದೇವ ನಿನ್ನ ಪಾದಕೆ ಸಲುವಂತೆ ಮಾಡಿ |
ಪಾವನ ಮಾಡುವುದು ಪತಿತನ ಉದ್ಧರಿಸಿ |
ಶ್ರೀವರ ತಿರುವೇಂಗಳ ವಿಜಯವಿಠಲ ಕೃಷ್ಣ |
ಕಾವ ಕರುಣಾನಿಧಿ ನೀಲಗಿರಿವಾಸಾ ||

ತ್ರಿಪುಟತಾಳ

ದಯಮಾಡಿದೆನ್ನೊಡೆಯ ದಾಸ ದಾಸನಿಗೊಲಿದು ಇಂದು |
ಭಯವೇ ಬಡಿಸುತಿಪ್ಪ ಭಯವೆಂಬೊ ಮಾರಿಯ |

ಜಯಕೆ ಒಳಗಾಗಿ ಇದ್ದ ಮಾನವಂಗೆ ಅಭಯವಿತ್ತು
ಪರಿಹರಿಸುವೆ |
ತ್ರಯಲೋಕದೊಳಗೆ ನಿನಗೆ ಈಡಾರು ಭಕ್ತರ |
ಹೊಯಲಿಗೆ ಒದಗಿ ಬಂದಾಕ್ಷಣದಲ್ಲಿ |
ಕ್ಷಯವಾಗಗೊಡದಂತೆ ಅವನ ಪಾಲಿಸುವೆ ಅ- |
ಕ್ಷಯ ಮೂರುತಿ ನಿನ್ನ ಶಕ್ತಿಯನು ಬಲ್ಲೆ |
ಬಯಲಾಗಿ ಪೋಗೋವು ಕ್ರೂರ ಗ್ರಹಗಳೆಲ್ಲ |
ಆಯುತರಾದರೆ ನಿಮಿಷ ಮಾತ್ರದಲ್ಲಿ |
ಜಯ ಜಯ ಜಯಾ ದೇವ ನಿನ್ನವರಿಗೆ ಅಪ- |
ಜಯವುಂಟೇನೋ ನೂರು ಕಲ್ಪವಾಗೆ |
ಭಯದೂರ ವೆಂಕಟಗಿರಿವಾಸಾ ಸಿರಿ ವಿ- |
ಜಯವಿಠಲರೇಯ ಸತ್ಕೀರ್ತಿಪುರುಷ ||

ಅಟತಾಳ

ದೇಶದೊಳಗೆ ನಿನ್ನ ದಾಸನೆಂದರೆ ಆವದಾವದು ಭಯವೊ |
ಲೇಶ ಬಿಡದೆ ಎನ್ನ ಪಾಲಿಸಿದರೆ ಲೇಸು ಲೇಸು ನಿನಗೆಂಬರು
ಭೂಷಣ ಬಪ್ಪುದು ಸಕಲ ಸುರರೊಳು |
ದಾಸರ ಪೊರೆವ ಕರುಣಿಯೆಂದು |
ಏಸೇಸು ಕಲ್ಪಕ್ಕೆ ಇದಕ್ಕನ್ಯವಾದ |
ಕೋಶ ಮತ್ತಾವುದು ಕಾಣೆನೊ |
ಶೇಷಾದ್ರಿವೆಂಕಟ ವಿಜಯವಿಠಲರೇಯ ಕೇಶವ
ಕ್ಲೇಶವಿನಾಶಾ ||

ಆದಿತಾಳ

ಇಂದೇಯಾಗಲಿ ಮುಂದೆಯಾಗಲಿ ಎಂದಿಗೆಂದಿಗೆಯಾದರು |
ಒಂದೊಂದಾಗಿ ಅನೇಕ ಜನುಮ ಬಂದು ಪ್ರಾಪ್ತವಾದರು |
ಇಂದಿರೇಶ ನಿನ್ನವರಂಘ್ರಿ ಪೊಂದುವ ಜ್ಞಾನ ದೃಢವಿರಲಿ |
ಮಂದನಾಗಿ ದುರ್ಜನರೊಡನೆ ಸಂದುವ ಮಾರ್ಗವ ಕೊಡದಿರು |
ಸುಂದರ ಗಿರಿವಾಸಾ ವೆಂಕಟ ವಿಜಯವಿಠ್ಠಲ ದಾತರ |
ವಂದಿಸುವೆ ನಿತ್ಯದಲ್ಲಿ ಸುಖ ಸಿಂಧುವಿನೊಳು ಇಡು ಎನ್ನ ||

ಜತೆ

ರಕ್ಷೆಯಾದರು ವೀರ ವೈಷ್ಣವರ ಪಾದಕೆ ಹೇ |
ಮೋಕ್ಷಾದ್ರಿ ವೆಂಕಟ ವಿಜಯವಿಠಲರೇಯಾ ||

೩

## ಹರಿನಾಮ ಮಹಿಮೆ

ಧ್ರುವತಾಳ

ಹರಿನಾಮ ಪ್ರಹ್ಲಾದನ್ನ ಮೊರೆ ಕೇಳಿ ಒದಗಿತು |
ಹರಿನಾಮ ಗಜೇಂದ್ರನ ಆಪತ್ತು ಪರಿಹರಿಸಿತು |
ಹರಿನಾಮ ಅಜಮಿಳನ ಪಾತಕ ಕೆಡಿಸಿತು |
ಹರಿನಾಮ ನಾರದನ ನೀಚಯೋನಿ ಬಿಡಿಸಿತು |
ಹರಿನಾಮ ಭೀಷ್ಮನ ಪಂಥವ ಗೆಲಿಸಿತು |
ಹರಿನಾಮ ಅಂಬರೀಷನ ವ್ರತವ ಸಂರಕ್ಷಿಸಿತು |
ಹರಿನಾಮ ವಿಭೀಷಣನ ಪಟ್ಟವ ಕಟ್ಟಿಸಿತು |

ಹರಿನಾಮ ದ್ರೌಪದಿಯ ಮಾನವ ಕಾಯಿತು |
ಹರಿನಾಮ ಧ್ರುವನ ತಪಸಿಗೆ ಒಲಿಯಿತು |
ಹರಿನಾಮ ಅಹಲ್ಯ ಶಾಪವ ಹಿಂಗಿಸಿತು |
ಹರಿನಾಮ ಬಲಿನೃಪನ ಇಂದ್ರನ ಮಾಡಿತು |
ಹರಿನಾಮ ಕುಚೇಲನ ದಾರಿದ್ರ್ಯ ಕಳೆಯಿತು |
ಹರಿನಾಮ ವಿದುರನ ಕ್ಷೀರಕ್ಕೆ ಹಿಗ್ಗಿತು |
ಹರಿನಾಮ ದೇವಕಿಯ ಬಂಧನ ಬಿಡಿಸಿತು |
ಹರಿನಾಮ ಪಾರ್ಥನ ಜೀವವ ಉಳಿಸಿತು |
ಹರಿನಾಮ ಜನಕನ ದೃಢಮಾಡಿ ನೋಡಿತು |
ಹರಿನಾಮ ಪುಂಡರೀಕನ ಭಕುತಿಗೆ ಮೆಚ್ಚಿತು |
ಹರಿನಾಮ ಗುರುಪುತ್ರನ ತಿರುಗಿ ಬದುಕಿಸಿತು |
ಹರಿನಾಮ ವಾಲ್ಮೀಕನ ಮುನಿಪನೆಂದೆನಿಸಿತು |
ಹರಿನಾಮ ಅಕ್ರೂರಗೆ ನಿಜರೂಪ ತೋರಿಸಿತು |
ಹರಿನಾಮ ಭೂಮಿಯ ಉದ್ಧಾರಗೈಸಿತು |
ಹರಿನಾಮ ಪರಿಪರಿ ಭಕ್ತರೊಡನಾಡಿತು |
ಹರಿನಾಮ ಒಂದಿರಲು ಅನ್ಯ ಉಪಾಯವೆ |
ಹರಿನಾಮ ಸಮಸ್ತ ಭಯನಿವಾರಣವಯ್ಯ |
ಹರಿನಾಮ ಮನಸಿಗೆ ನಿರ್ಮಲ ಕಾರಣ |
ಹರಿನಾಮ ಸರ್ವದೇವತೆಗಳಿಂದಧಿಕವೊ |
ಹರಿನಾಮ ಅಜಭವಾದಿಗಳಿಗೆ ಗತಿಪ್ರದ |
ಹರಿನಾಮ ಆರು ಬಣ್ಣಿಪರಯ್ಯ |
ಹರಿಹರಿಯೆಂದು ನೆನೆದಡೆ ರೋಗಂಗಳು |
ಉರುಳಿ ಪೋಗುವುವೊ ನೀನು ಕೇಳೊ ಎಲೊ ಕೇಳೊ |
ಹರಿನಾಮ ಸಕಲ ಪ್ರಾಯಶ್ಚಿತ್ತಕ್ಕೆ ಮೊದಲು |
ಹರಿನಾಮವಿರಲಾಗಿ ಮತ್ತೊಂದಪೇಕ್ಷೆಯೆ |
ಹರಿನಾಮ ನಿಜ ಸ್ವಾಮಿ ವಿಜಯವಿಠಲನೆಂಭ್ರ |
ಪರಿಶುದ್ಧನಾಗಿ ಎಳ್ಳಸಿತು ಮನದಲ್ಲಿಡು ||

ಮಟ್ಟತಾಳ

ಹರಿನಾಮವೇ ನಮ್ಮ ಮನವಶವಾಗಿರಲು ।
ಮರೆದು ಪಾಮರನಾಗಿ ಕೆಟ್ಟು ಪೋಗುವುದೇಕೆ ।
ಹರಿನಾಮ ನಿತ್ಯ ಎದುರಲಿ ನೀಡಿದ ಗುರುತು ನಿಂ- ।
ತಿರಲಾಗಿ ವ್ಯಸನ ಮಾಡುವುದೇಕೆ ।
ಮರುಳೆ ಮಾತನು ಕೇಳು ಅಂತರ ಕ್ಲೇಶವನು ।
ಇರಗೊಡದಿರು ನಿನಗೆ ತಿಳುಪುವೆನೊ ಇನ್ನು ।
ಪುರಮರ್ದನ ನಮ್ಮ ವಿಜಯವಿಠಲನ್ನ ।
ಸ್ಮರಣೆ ಮಾಡಲು ಬಂದ ರೋಗವೇ ವಿನಾಶ ॥

ತ್ರಿಪುಟತಾಳ

ಹರಿನಾಮವೆಂಬೋದೆ ದುರಿತಕಾನನವ ಸಂ- ।
ಹರಿಸುವ ಪ್ರಳಯಾಗ್ನಿ ಸೋಲಿಸುತಿಪ್ಪುದು ।
ಹರಿನಾಮ ನೆನೆದವರ ಕುಲಕೋಟಿ ಉದ್ಧಾರ ।
ಹರಿನಾಮ ನಂಬಿದರೆ ಕೇಡಿಲ್ಲ ಕೇಡಿಲ್ಲ ।
ಹರಿನಾಮ ಜಗದೊಳು ಅಖಂಡವಾಗಿ ನಿಂ- ।
ದಿರದೆ ವ್ಯಾಪಿಸಿಕೊಂಡು ಇಪ್ಪದಿದಕೊ ।
ಹರಿನಾಮ ಮಹಾ ಪ್ರತಿಬಂಧಕಗಳ ಕಳೆದು ।
ಪೊರೆವುತ್ತಲಿರೆ ನಮಗೆ ಚಿಂತೆಯಾಕೆ ।
ನರದೇಹಕೆ ಬಂದ ಬಣಗು ಉಪದ್ರವ ।
ಪರಿಹರಿಸಿ ಬಿಡುವುದು ಸೋಜಿಗವೆ ।
ಒರೆದೊರೆದು ಜ್ಞಾನಿಗಳು ಪೇಳುವ ಕಥೆ ಕೇಳಿ
ಸ್ಥಿರ ಮಾಡುವುದು ಚಿತ್ತ ಸುಖವೇ ಉಂಟು ॥
ತಿರುಗಿ ಬಾರದು ವ್ಯಾಧಿ ಪೋಯಿತೆಂದು ತಿಳಿ ।
ಹರಿನಾಮದ ಶೌರ್ಯ ಸತತದಲ್ಲಿ ।

ಜ್ವರ ತಾಪಹಾರಿ ನಮ್ಮ ವಿಜಯವಿಠಲ ಸಜ್ಜ- |
ನರ ಮಾತನು ಪುಸಿಯಾಗಗೊಡನೊ ||

ಅಟತಾಳ

ಹರಿನಾಮ ಇದ್ದಲ್ಲಿ ಹರುಷವೇ ಎಂದಿಗು |
ಸುರಾದಿಗಳು ಬಲ್ಲರು ಬಹುಕಾಲದಿ |
ನಿರಯದೊಳಿದ್ದರು ಕಡೆಹಾಕುವುದು ಆದರ- |
ದಿಂದ ಪಾಲಿಸಿ ಪರಮ ಪ್ರೀತಿಯಿಂದ |
ನಿರುತ ಜ್ಞಾನ ಭಕ್ತಿ ವೈರಾಗ್ಯ ಕೊಡುವುದು |
ಬರಿದಾಗದು ಕಾಣೋ ತುಂಬಿದ ಭಾಂಡಾರ |
ಪಿರಿದಾಗಿ ಎಂಥೆಂಥ ರಾಯರಾಯರನೆಲ್ಲ |
ಅರೆಕ್ಷಣದಲ್ಲೀಗ ಕಾಯಿತು ಕಾಯಿತು |
ಧರಣಿಪಾಲಕ ರಂಗ ವಿಜಯವಿಠಲರೇಯ |
ಹೊರಗೆ ಒಳಗೆ ಇದ್ದು ಆನಂದಪಡಿಸುವ ||

ಆದಿತಾಳ

ಒಂದೊಂದು ಹರಿನಾಮ ನೆನೆಸಿದರೆ ನಮಗೆ |
ಸಂದಿಸಂದಿಯಲಿದ್ದ ರೋಗಗಳು ಸಂಹಾರ |
ಕುಂದು ಎಣಿಸದಿರು ಕುತ್ಸಿತ ಯೋಚನೆ ಬಿಡು |
ಪೊಂದು ತಿರುಗಿ ಪೊಂದು ಹರಿನಾಮ ಸ್ಮರಣೆಯನು |
ನಿಂದಲ್ಲಿ ಕುಳಿತಲ್ಲಿ ನಡೆದಾಡುವುದರಲ್ಲಿ |
ಮಂದಮತಿಯಲ್ಲಿ ಮದಡನಾಗಿದ್ದಲ್ಲಿ |
ಸಂದೇಹಬಡದಲೆ ಸರ್ವೋತ್ತಮನ ಮನ- |
ದಿಂದ ತೊಲಗಲೀಯದೆ ಮುಂದುಗೆಡದೆ ನೆನೆಸು |

ಮಂದರಧರ ನಮ್ಮ ವಿಜಯವಿಠಲರೇಯ |
ಬಂದು ಭಕ್ತಿಗೆ ಒಲಿದು ಮನೋಭೀಷ್ಟ ಕೊಡುವನು |

ಜತೆ

ಇತ್ತ ಮುಂದಾಗಿ ನನಗಿನ್ನಾವ ಭಯವಿಲ್ಲ |
ಚಿತ್ತಜಪಿತ ವಿಜಯವಿಠಲನೆ ಗತಿಯೆನ್ನು ||

೪

## ವೈರಾಗ್ಯ

ಧ್ರುವತಾಳ

ಈ ಭಾಗ್ಯವೇ ಸಾಕು ಇಹದಲ್ಲಿ ಇದ್ದನಿತು |
ಸೌಭಾಗ್ಯವನೊಲ್ಲೆ ಸರಸಿಜಾಕ್ಷ |
ಕುಭಾವ ಬಿಟ್ಟು ನಿನ್ನ ಚರಣಕಮಲವನ್ನು |
ಲೋಭವಾಗದಂತೆ ಎನ್ನ ಮನಸು |
ನಾಭಿಯಿಂದಲಿ ಏಕ ಭಕುತಿ ಮಾರ್ಗವ ಪಿಡಿದು |
ಲಾಭವಾಗಲಿ ಬಿಡದೆ ನಿರುತಾರ್ಜನೆ |
ಶ್ರೀಭಾಗೀರಥಿಪಿತ ವಿಜಯವಿಠಲರೇಯ |
ಭಾಗವತರೊಡನೆ ಕೂಡಿಸೆನ್ನಾಡಿಸೊ ||

ಮಟ್ಟತಾಳ

ಈಡು ಒಂದು ತೊಡರು ಹಾಕಿ ನುಡಿ-ನುಡಿಗೆ ಹಿಗ್ಗಿ |
ಗಡಗಡನೆ ಸುಖಬಡುವರ ವಿಷಯಗಳೆಡೆಗೆ ನೋಡಿ |
ಒಡನೆ ಸಕಲವಸ್ತು ಕೊಡುವ ಕೊಡುವ ಸೊಬಗು |

ಪಡೆಯೆನಗಿವು ಒಂದಡಿಯಾಳಾಗಿದ್ದರು |
ನಡೆಯದು ಎನ್ನೊಡೆಯ ನಡೆಯದು ಎ- |
ನ್ನೊಡೆಯ ಪಡೆದುಪೋದವರು ಕಡೆಗಾಣಲಿಲ್ಲ |
ಪೊಡವಿಗೆ ನಾನಾವ ಗಿಡದ ತೊಪ್ಪಲು ಫಣಿಯ |
ಪೆಡೆಯ ತುಳಿದ ದೇವ ವಿಜಯವಿಠಲಜೀಯಾ ||

ತ್ರಿಪುಟತಾಳ

ಉತ್ತಮ ತೀರ್ಥಯಾತ್ರೆ ಮಾಡುವುದೆ ಭಾಗ್ಯ |
ಉತ್ತಮ ಶ್ರವಣಜನ್ಯವಾಗುವುದೆ ಭಾಗ್ಯ |
ಉತ್ತಮ ಸ್ಥಿಯಲ್ಲಿ ವಾಸವಾಗುವುದೆ ಭಾಗ್ಯ |
ಉತ್ತಮ ಸಂಗತಿಯಲ್ಲಿ ಇಪ್ಪುದೆ ಬಲು ಭಾಗ್ಯ |
ಉತ್ತಮ ದಿನಗಳಲ್ಲಿ ದೇಹ ಬಿಡುವುದೆ ಭಾಗ್ಯ |
ಉತ್ತಮದೊಳುತ್ತಮ ಹರಿ ನಾಮವೆ ಭಾಗ್ಯ |
ಉತ್ತಮ ಶ್ಲೋಕ ನಮ್ಮ ವಿಜಯವಿಠಲರೇಯ |
ಉತ್ತಮನ ಮಾಳ್ಪುದು ಎನಗೆ ಮಹಾ ಭಾಗ್ಯವೊ ||

ಅಟತಾಳ

ಪರರ ಬಾಗಿಲೊಳು ಪರಿಚಾರಕನಾಗಿ ಸಾಸಿರ ಬಾರಿ |
ಒರಲಿ ಕಂಡವರಿಗೆ ಶಿರಬಾಗಿ ಮರಿಯಾದೆ ಇಲ್ಲದೆ |
ತಿರುಗಿ ತಿರಿದು ಹಗಲಿರುಳು ಬಿಡದೆ ಅವರರಿದಂತೆ ಅವಸರ |
ಪರಿಸರಿಯಿಂದಲಿ ಮಾಡಿ ಈ ಪೊಟ್ಟೆಯ |
ಪೊರೆವ ಕಾರಣವಿತ್ತವ ತಂದು ಬದುಕುವು- |
ದರಕ್ಕಿಂತ ಸುಮ್ಮನೆ ಮರಣವೆ ಲೇಸಯ್ಯ |
ಪರಮಾತ್ಮ ವಿಜಯವಿಠಲರೇಯ ನಿನ್ನ ಪೆ- |
ಸರು ಪೊಗಳುವ ದಾಸರ ಮನೆ ಮುಂದೀಗ |
ಬರಿದೆ ಇಪ್ಪುದೇ ಭಾಗ್ಯವೆಂದೆ ||

ಆದಿತಾಳ

ಅನಂತ ಜನುಮದೊಳು ಒಂದೇ ಜನುಮದಲ್ಲಿ ।
ಅನಂತ ಯುಗದೊಳು ಒಂದೇ ಯುಗದಲ್ಲಿ ।
ಅನಂತ ದಿನದೊಳು ಒಂದೇ ದಿನದಲ್ಲಿ ।
ಅನಂತ ಘಳಿಗೆಯೊಳು ಒಂದೇ ಘಳಿಗೆಯಲ್ಲಿ ।
ಅನಂತ ಕಾಲದೊಳು ಒಂದೇ ಕಾಲದಲ್ಲಿ ।
ಘನ ಭಾಗ್ಯನಾಗಿ ಒಂದಡಿ ಸುಖಬಡುವ ।
ಬಿನ್ನಾಣವನು ನಾನಿನ್ನು ಒಲ್ಲೆನೋ ರಂಗ ।
ನಿನ್ನ ಸ್ಮರಣೆಯಲ್ಲಿ ಚೆನ್ನಾಗಿ ರತಿಯಿಡಿಸೊ ।
ಪನ್ನಗಶಯನ ಶ್ರೀ ವಿಜಯವಿಠಲರೇಯ ।
ಎನ್ನ ಸಾಕುವ ಪ್ರಸನ್ನಮೂರುತಿ ಕೇಳೊ ॥

ಜತೆ

ದಯಮಾಡೊ ಎನ್ನೊಡೆಯ ದಾಸನೆಂಬುವುದು ನಿ- ।
ಶ್ಚಯವಾಗಿ ನಿರುತ ವಿಜಯವಿಠಲ ಎನಗೆ ॥

## ಗುರುಭಕ್ತಿ

ಧ್ರುವತಾಳ

ಗುರುಭಕ್ತಿ ಪ್ರಧಾನ ಸಾಧನವೊ ನಿತ್ಯ ।
ಗುರು ಶುಶ್ರೂಷಕೆ ಮಹಾಕರ್ಮ ನಾಶವು ।
ಗುರು ಉಪದೇಶವೇ ಸುಜ್ಞಾನ ಮಾರ್ಗವು ।
ಗುರು ಪ್ರಸಾದವೇ ಅಂಗ ಭಂಗಕ್ಕೆ ಕಾರಣ ।
ಗುರು ಪರಮಾನುಗ್ರಹ ಮಾಡಿದಡೆ ನಿರುತ ।

ಪರತತ್ತ್ವಪ್ರಮೇಯ ಕರತಳದೊಳಗಿದ್ದ |
ತೆರದಿ ಅರುಹು ಆಗುವುದು ಮಾನವರಿಗೆ |
ಸ್ವರೂಪ ಯೋಗ್ಯತೆ ದಾನವಿತ್ತು ಪಾಲಿಪುದು |
ಗುರುಭಕುತಿ ಗುರುಬಲ ಒಂದೆ ಇದ್ದರೆ |
ಧರೆಯಲ್ಲಿ ಗೆಲವಕ್ಕೆ ಆಗುವುದು |
ಗುರುಕರುಣ ಪಡೆದಡೆ ಧನ್ಯನೋ ಧನ್ಯನೊ |
ಗುರುಧ್ಯಾನ ಮಾಳ್ಪುದು ಜನರು ಮನದೊಳು ಸದಾ |
ಗುರುಚರಣಾಬ್ಜ ಭೃಂಗನಾಗೊ ನಿರಂತರ |
ಗುರುಗಳಿಗೆ ಸಮಾನಗಾಣೆನೊ ಜಗದೊಳು |
ಗುರುವೊಲಿದಡೆ ಸರ್ವವಿದ್ಯವು ಪ್ರಾಪ್ತಿ |
ಗುರುಮಂತ್ರ ಗುರುಜಪ ಗುರುನಾಮಸ್ಮರಣೆ |
ಹಿರಿದಾಗಿ ಕೈಕೊಂಡು ಸುಖಿಸಿರೊ ಸುಜನರು |
ಗುರು ಭವಾಬ್ಧಿ ದಾಟಿಪ ಸಿರಿವಿಜಯವಿಠಲರೇಯ |
ಗುರು ಇಲ್ಲದವರಿಗೆ ಒಲಿಯನು ಕಾಣಿರೋ ||

ಮಟ್ಟತಾಳ

ತರಳ ಏಕಲವ್ಯ ಏಕಾಂತದಲೊಂದು |
ಗುರುಪ್ರತಿಮೆಯನ್ನು ನಿರ್ಮಾಣ ಮಾಡಿ |
ನಿರುತ ಭಕುತಿಯಿಂದ ಮಹಾ ಶಸ್ತ್ರಾಸ್ತ್ರ ವಿದ್ಯ |
ಹರುಷೋನ್ನತದಿಂದ ಸಂಪಾದಿಸಿಕೊಂಡ |
ಗುರುಭಕುತಿಯಿದ್ದ ಮನುಜಗಾವಲ್ಲಿಗೆ |
ಸ್ಮರಿಸಿ ಬೇಡಿದ ವಿದ್ಯ ಫಲಿಸುವದೊ ಮರುಳೇ |
ತರಳನಾದರು ಕೇಳು ಮಾಡಿದ ವಿಶ್ವಾಸ |
ಬರಿದೆಯಾಗದು ಕಾಣೊ ಮುಕ್ತಿವಂತರಿಗರಿದೆ |
ವರ ಮೂರುತಿ ನಮ್ಮ ವಿಜಯವಿಠಲರೇಯ |
ಗುರುದ್ವಾರದಿಂದ ಪೊರೆವ ಪಾಪ ಕಳೆವ ||

ರಾಗ – ಆನಂದಭೈರವಿ ತ್ರಿಪುಟತಾಳ

ಗುರುಗಳು ವರಶಾಪ ಕೊಟ್ಟರಾದಡೆ ಅವನು |
ಸುರನರ ಋಷಿಲೋಕ ತಿರುಗಿದರು ತೊಲಗುವುದೆ |
ಸರಸರನೆ ಒಂದು ಜನುಮದಿ ತೀರುವುದಲ್ಲ |
ಎರಡೊಂದು ಜನುಮಾಂತರದಲ್ಲಿ ಅನುಭವ |
ಗುರುಕರುಣವ ಮಾಡಿದಂತೆ ನಾನಾ ಭೋಗ |
ಶರೀರವೆತ್ತೆತ್ತಿ ಉಣಬೇಕೊ ದ್ವಿವಿಧ |
ಗುರುಪ್ರಸಾದದಿಂದ ಮರುತಮತವನೆ ಹೊಂದಿ |
ಚರಿಸುತಿಪ್ಪ ನರನ ನೋಡಿ ಜ- |
ನರು ಸಹಿಸಲಾರದೆ ಅವರು ನುಡಿದರೇನಾಹುದು |
ಕರಣಶುದ್ಧವಿಲ್ಲದೆ ಕೆಟ್ಟು ಪೋಗುವರು |
ಗುರುಕರುಣ ಬಂದು ಪಾವನ ಮಾಡಿದ ಮೇಲೆ |
ದುರಿತದ ಭಯವಿಲ್ಲ ದೂಷಣೆ ಭಯವಿಲ್ಲ ಆದರೆ |
ಆರಾರ ಅಂತಃಕರಣಾವಾವ ಪರಿಯಲ್ಲಿ ಇಪ್ಪುದೊ
ದೂಷಿಸಬಾರದು |
ವರ ಸತ್ಯವತಿಯ ಸೂನು ನಾನೂರು ಕೋಟಿ ಮೇಲೆ |
ಎರಡೊಂದು ಹತ್ತುಲಕ್ಷ ಗ್ರಂಥವ ಮಾಡಿರೆ |
ಹಿರಿಯರು ಪೇಳಿದ ಮಾತಿಗೆ ಮನದೆಗೆದು |
ಸರಿಬಾರದೆಂದಾಡುವ ನರನೇ ಮೂರ್ಖ |
ಉರಗಶಯನ ನಮ್ಮ ವಿಜಯವಿಠಲರೇಯ |
ಪೊರೆಯಬೇಕಾದಡೆ ಉತ್ತಮ ಗುರು ಬೇಕೋ ||

## ಶ್ರೀಪತಿ ಕಥೆ ಇದು–ಮುಟ್ಟು

ಅಟತಾಳ

ನದಿಯೊಳಗೊಂದು ಅಸ್ಥಿಯ ಹಾಕಿ ತನ್ನಯ |
ಬದಿಯಲ್ಲಿದ್ದವರಿಗೆ ಮುಟ್ಟಬಾರದು ಬಂ- |

ತಿದಕ್ಕೆ ದೋಷವೆಂದು ಪೇಳಿದರಾ ಮಾತು |
ಬುಧರು ಮೆಚ್ಚುವರೇನೊ ಕೇಳಿದ ಕ್ಷಣದಲ್ಲಿ |
ಮುದದಿಂದಲಿ ತಮ್ಮ ಗುರುಗಳ ಪದಧ್ಯಾನ |
ಹೃದಯದಲ್ಲಿಟ್ಟು ಪೇಳಿದ ಕಾವ್ಯಕ್ಕೆ ಲೇಶ |
ತುದಿ ಮೊದಲಾದರು ಸಂಶಯ ಬರುವುದೇ |
ಉದಧಿಯಂತೆ ತುಂಬಿದೆ ನೋಡೋ ಸತ್ಕರ್ಮ |
ಪದೇಪದೆ ಭಗವಂತನ ಸಂಗಡ |
ವಿಧಿ ತಪ್ಪದಲೆ ಆಡಿದ ಮಹಾ ಮಹಿಮರು |
ನಿದರ್ಶನವಿಲ್ಲದಲೆ ಹೇಳರು ಕಾಣೊ |
ಎದೆ ಗುದ್ದಿಕೊಂಡು ಕಸವಿಸಿಬಟ್ಟರೆ |
ಅದರಿಂದೇನಹುದು ಮಿಥ್ಯಾವಾದವೇಕೊ |
ಸದನದೊಳಗೆ ತಾನು ಕಾಣದಿರೆ ಕುರುಡ |
ಪದುಮಜಾಂಡವ ಓರ್ವರೂ ಕಾಣರೆಂಬಂತೆ |
ಮದಡುಮಾನವನ ಅಟ್ಟಹಾಸಕ್ಕೇನೆಂಬೆ |
ನದಿಗೆ ಚಂಡಾಲ ಯವನಕೋಟಿ ಸಮುದಾಯ |
ಅಧಮರು ಬಂದು ನಿಂದಿಸಿ ಬೈದು ಕಾಲಿಲಿ |
ಒದೆದು ಉಗುಳಿದರೆ ದೋಷ ನದಿಗುಂಟೇ |
ನದಿಸದೃಶನಾದ ಜ್ಞಾನಿಗೆ ಅಣಕ ಹಾ- |
ಕಿದರೆ ಅವನಿಗೆ ಕ್ಷೀಣತೆ ಬರಲಿಲ್ಲ ||
ಮಧುವೈರಿ ವಿಜಯವಿಠಲನ ಪಾದಾಂಬುಜ |
ಸದಮಲರಾಗಿ ಭಜಿಪರು ಗುರುಗಳೆನ್ನ ||

### ಆದಿತಾಳ

ವಾಸುದೇವನ ಭಾವ ಶ್ರೀಮಧ್ವಾಚಾರ್ಯರು ಬಲ್ಲರಯ್ಯ |
ವ್ಯಾಸ ಶಿಷ್ಯರ ಭಾವ ಜಯಮುನಿರಾಯ ಬಲ್ಲ |
ಲೇಸು ಜಯಾರ್ಯರ ಭಾವ ವ್ಯಾಸಮುನಿರಾಯ ಬಲ್ಲ |

ವ್ಯಾಸರಾಯರ ಭಾವ ವಿಜಯೀಂದ್ರ ವಾದಿರಾಜ- |
ರೀಸು ಜನರು ಬಲ್ಲರೆಣಿಸೊ ಪುರಂದರ- |
ದಾಸರು ಇವರೊಳು ದೇಶದೊಳಗೆ |
ದಾಸರ ನಿಜಭಾವಗರ್ಭ ಲೇಶ ಬಲ್ಲರು ಇವರ- |
ನುಸಾರಿಗಳು ನಿತ್ಯ ಶ್ರೀಶವಿಜಯವಿಠಲರೇಯನು ತಾ |
ರಾಶಿಯೊಳಗಿನ ಮಹಿಮೆ ಬಲ್ಲನು ಕಾಣೊ ||

ರಾಗ—ಆನಂದಭೈರವಿ

ಜತೆ

ನಮ್ಮ ಗುರುಗಳ ಕವನ ಮಿಥ್ಯಾಮತವೇದವನು |
ಬ್ರಹ್ಮರಾಕ್ಷಸ ಕಾಣೊ ವಿಜಯವಿಠಲ ಬಲ್ಲ ||

## ಭಕ್ತಿ

ಧ್ರುವತಾಳ

ಸಮ್ಮುಗನಾಗು ಗಿರಿಯ ತಿಮ್ಮನೋತ್ತಮ ಶ್ರೀಪುರುಷೋತ್ತಮ |
ಆ ಮಹಿಮ ರಮೆಯರಸ ಸರ್ವೋತ್ತಮ ಅಂತರಾತ್ಮ |
ಬೊಮ್ಮಜನಕ ಪರಮೋತ್ತಮ ರೇಪತಿರಮಣ ತಮ್ಮ ದೇವೋ- |
ತ್ತಮ ಜ್ಞಾನೋತ್ತಮ ವೈಷಮ್ಯ ಇಲ್ಲದ ಪರ- |
ಬೊಮ್ಮ ಉಮ್ಮನು ತಾನನುಪಮಚರಿತಾನ |
ನಿಮಿತ್ತಬಂಧು ಸರ್ವದಾಗಮ್ಯ ಹಮ್ಮಿನ ದೈವ |
ಖ-ಮ್ಮಹಿಯೊಳಗೆ ಅಹಮ್ಮತಿಯವನು ನಾನೆ |
ದಮ್ಮಯ್ಯ ಇಮ್ಮಯ್ಯ ಲಾಲಿಸೋ ನಮ್ಮಯ್ಯ |

ನಿಮ್ಮವನಾಗಿ ನಿನಗೆ ನಮೋನಮೋ ಎಂಬೆ |
ಹಮ್ಮು ಭಕ್ತರಕೂಡ ಸಮ್ಮತವಲ್ಲವೋ |
ಹೆಮ್ಮೆಯಿದ್ದಲ್ಲಿ ನಿನ್ನ ನಂಬಿದೆ ನೇಮದಲ್ಲಿ |
ಅಮ್ಲಾನ ಪಸಪಾಲ ವಿಜಯವಿಠಲ ಎನ್ನ |
ಉಮ್ಮಳಿಕೆ ಹರಿಸೊ ಅಮೃತದಾರಿಯ ತೋರೋ |
ಪಂಚನಾಡಿಯೊಳು ಇಪ್ಪ ಪಂಚಮೂರುತಿದೇವ |
ಪಂಚಭೂತದ ಪ್ರಾ- |
ಪಂಚ ಉಳ್ಳವನಯ್ಯ ಪಂಚಪರ್ವತದಲ್ಲಿ |
ಪಂಚವರ ಕೂಡ ವಂಚನೆಯಿಂದಲ್ಲಿ |
ಚಂಚಲಮನ ಮಾಡಿ ಹಿಂಚೆಮುಂಚೆ ತಿಳಿಯೆ |
ಪಾಂಚಜನ್ಯ ಪಾಣಿ ವಿಜಯವಿಠಲನ ವಿ- |
ರಂಚಿ ದೇವತೆಗಳ ವಂಚಿಸಿದ ದೈವ |

### ರೂಪಕತಾಳ

ಷೋಡಶೋಪಚಾರ ಮಾಡಲಿ ಬಲ್ಲೆನೆ |
ಮೂಢನು ನಾನು ಈ ನಾಡೊಳಗೆಲ್ಲ |
ಕಾಡಿ ಬೇಡುವೆನೆಂಬೊ ಹೇಡಿತನವಲ್ಲದೆ |
ಮಾಡಿ ಒಂದಾದರು ಮಾಡಿ ಬಂದಿತೆ ಮಾನ |
ಹಾಡಿ ಪಾಡಿ ನಿನ್ನ ನೋಡಿ ಅರ್ಥಿಯಿಂದ- |
ಲಾಡಿ ಕೊಂಡಾಡಿ ಕೂಡಲಿಲ್ಲ |
ಗೋಡೆಯ ಸಂಗಡ ಸರಸವಾಡಿದರಾ- |
ಗೋಡೆ ನೋಡಿ ಹರುಷದಿಂದಲಾಡುವುದೇನೊ |
ಆಡಲೇನು ನಿನಗೆ ಈಡು ಇಲ್ಲದ ಮಹಿಮ |
ಬಿಡೆನು ನಿನ್ನ ಚರಣಯುಗಳ ಈ ಗಾ- |
ರುಡತನವೇನೊ ಗೂಢ ಕರುಣಿ ರಂಗ ವಿಜಯವಿಠಲ ಇತ್ತ
ಮಾಡು ಮೊಗವನು ಗಾಡಿಕಾರದೇವ ||

ಝಂಪೆತಾಳ

ದೀಪಕ್ಕೆ ನೆರಳುಂಟೆ ನಿನ್ನ ಪರಿಚಾರರಿಗೆ |
ಪಾಪಗಳುಂಟೇನೊ ಪರಮಪುರುಷ |
ಕೋಪತಾಪಗಳಿಂದ ನಾನಿದ್ದರೆ ನಿನ್ನ |
ಶ್ರೀಪಾದ ಧೇನಿಸಿದ ಜನರಿಗೆಲ್ಲ |
ಅಪಾರ ಜನುಮ ದುಷ್ಕರ್ಮಂಗಳಿರಲು |
ಪೋಪದೆ ಇರಬಲ್ಲವೇನೊ ಪೇಳೊ |
ಶ್ರೀಪತಿ ನಾನೊಬ್ಬ ಮಾಡಿದ ದೋಷಕ್ಕೆ |
ನೀ ಪರಿಹಾರ ಕಾಣಲಾಪದೆ ಸರಿ ಅಯ್ಯ |
ಆಪತ್ತಿಗಾಗುವ ಶಕ್ತ ನಿಂತಾದಡೆ |
ತಾಪ ಕಳೆವರ್ಯಾರೊ ಪತಿತರೊಡೆಯ |
ಗೋಪಾಲರೊಡನಿಪ್ಪ ವಿಜಯವಿಠಲ ಕೃಷ್ಣ |
ಕಾಪಾಡುವ ದೈವ ಎನ್ನ ಅನುದಿನ ಬಿಡದೆ ||

ತ್ರಿಪುಟತಾಳ

ಕರಗಿಸಿದ ಬೆಣ್ಣೆ ಘೃತವಾದಮೇಲೆ |
ತಿರುಗಿ ನವನೀತವೆನಿಸುವುದೆ |
ಹರಿ ನಿನ್ನ ದಾಸರ ಚರಣಯುಗಳವನ್ನು |
ನೆರೆ ನಂಬಿದ ಮೇಲೆ ನರರೊಳು ಗಣನೆ |
ಅರೆಮರೆ ಮಾಡದೆ ಎನ್ನ ಕಡೆಗೆ ನೋಗ |
ತಿರುಹು ಸುಂದರಮೂರುತಿ ನಿರ್ಮಲೇಶ |
ಅರಿಗಳ ದಲ್ಲಣ ವಿಜಯವಿಠಲ ನೀನೆ |
ಕರುಣ ಮಾಡದಿರೆ ಮುಂದೆ ಸಲಹುವರ್ಯಾರೊ ||

### ಅಟತಾಳ

ಭಕ್ತ ಪ್ರಹ್ಲಾದ ನಿನಗೇನು ತಂದಿತ್ತ |
ಶುಕಮುನಿ ನಿನಗೇನು ಉಪಚಾರ ಮಾಡಿದ |
ಸುಖಬಡಿಸಿದನೇ ನಾರದ ಬಂದು ಅನುದಿನ |
ರುಕುಮಾಂಗದ ತೃಪ್ತಿಬಡಿಸಿದನೆ ನಿನಗೇನು |
ಶಿಖರವೆತ್ತಿದನೇನೊ ಲಂಕಾಧೀಶನೆ ಬಂದು |
ಮುಖವಮಾಡೋದಕ್ಕೆ ಧನವಿತ್ತನೆ ನರ ಪುಂಡ- |
ರೀಕನು ನಿನಗೆ ಏರುವ ರಥವಿತ್ತನೆ ಜನಕನು |
ಭಕುತಿಗೆ ಘಳಿಸಿಹಾಕಿದನೇನೊ ಧ್ರುವರಾಯ ಶ್ರೀ. |
ನಕ ಮೊದಲಾದವರೇನು ಮಾಡಿದರೊ |
ಭಕುತಿಯಿಂದಿನಿತು ಭಜಿಸಿದರಲ್ಲದೆ |
ಅಕ್ಕಟ ನಾನೊಬ್ಬನೆ ನಿನಗಾಗದವನೇನೋ |
ಲಕುಮೀರಮಣ ನಮ್ಮ ವಿಜಯವಿಠಲ ನಿನ್ನ |
ಮುಖವ ತೋರೋ ಎನ್ನ ಭಕುತಿಯಿಂದಿನಿತು !

ಒಳಿತಾದರೆಯೇನು ಇದು ಕಡೆಯಾಗುವುದೆ ಬಹು- |
ಕಾಲದಲ್ಲಿ ನಿನಗೆ ಎನಗೆ ಸಖತನ |
ಮಿಳಿತವಾಗಿ ಇರಲಾಗಿ ನೀ ಪೋಗುವುದೆಂತು |
ತಿಳಿಯ ಪೇಳುವುದು ಕೈಮುಗಿದು ಬಿನ್ನೈಸುವೆ |
ಪೊಳೆವ ವಸ್ತ್ರಕ್ಕೆ ಎಲ್ಲಿ ಎಲ್ಲಿಗಾದರೆ ಬಂದೆ |
ಹುಳುಕು ಇದ್ದರೆ ನೋಡಿ ತೆಗೆದು ಬೀಸಾಡಿ ಅದು |
ಮೆಲ್ಲುವರಲ್ಲದೆ ವಿವೇಕನಾದವನು |
ನೆಲಕೆ ಈಡ್ಯಾಡನು ಕೇಳೊ ಹರಿಯೆ |
ಹುಳುಕು ಕರ್ಮಂಗಳು ಎನ್ನಲ್ಲಿ ಅಪಾರವುಂಟು ತೆಗೆಯ- |
ಬಲ್ಲ ಮಹಿಮ ತೆಗೆದು ಕಳೆಯೊ |
ಸುಳಿಯ ಸುಲಭವಾಗಿ ವಿಜಯವಿಠಲ ಭಕುತಾ- |
ವಳಿಗೆ ಸೂರೆಗಾಣೊ ತಪ್ಪದು ಕೆಲಕಾಲ |

ಜತೆ

ಇತ್ತ ಮುನ್ನೆ ಎನ್ನೊಳು ಇರಸಲ್ಲದ ಜಾಡೆ ।
ಚಿತ್ತಕ್ಕೆ ಬಂದಂತೆ ಮಾಡೊ ವಿಜಯವಿಠಲರೇಯಾ ॥

೭

## ಅನ್ನದಾನ ಮಹಿಮೆ

ಧ್ರುವತಾಳ

ಅನ್ನದಾನ ಪ್ರಧಾನ ಸಿಧಾನಿಸಿ ನೋಡಲು ।
ಅನಂತ ಕಲ್ಪದಲ್ಲಿ ವಿಚಾರಿಸೆ ।
ಹೊನ್ನು ಮಿಕ್ಕಾದ ದ್ರವ್ಯ ಇತ್ತಡಾದರೆ ।
ಮನುಜ ಪೂರ್ಣನಾಗನು ಕೇಳು ಗುಣಿ ಕೇಳು ।
ಮುನ್ನ ಅಧ್ಯಾತ್ಮ ಆಧಿಭೂತ ಆಧಿದೈವ ।
ಚೆನ್ನಾಗಿ ತ್ರಿವಿಧ ತೃಪ್ತಿಕರವೋ ನಿತ್ಯ ।
ಭಿನ್ನ ಜೀವರಲ್ಲಿ ತ್ರಯಕಾರ್ಯ ಉಂಟು ಈಗ ।
ಇನ್ನು ಲಾಲಿಸುವದು ಸ್ಥೂಲ ಸೂಕ್ಷ್ಮ ।
ತನ್ನ ಮೊದಲು ಮಾಡಿ ಅಧ್ಯಾತ್ಮನೆನಿಸುವುದು ।
ಅನ್ಯ ಜನರೆಲ್ಲ ಆಧಿಭೌತಿಕ ।
ಅನ್ಯದೇವತೆಗಳಿಗೆ ಆಧಿದೈವರೆನಿಸುವರು ।
ಉಣ್ಣಿಸುವದು ಈ ಪರಿ ತಿಳಿದರು ।
ಘನ ತಾಪತ್ರಯಗಳು ಹಿಂದಾಗಿ ಪೋಪುವು ಪಾ- ।
ವನನಾಗುವ ಜ್ಞಾನ ಭಕುತಿಯಿಂದ ।
ತನ್ನ ಮನಸು ಅಧ್ಯಾತ್ಮ ಇಂದ್ರಿಯಗಳೆ ಆಧಿದೈವ ।
ಚನ್ನ ಶರೀರವೆ ಆಧಿಭೂತವು ಸ. ।

ನ್ನನ ನೋಡಿದರೆ ಸಕಲ ಕಾರ್ಯದಲ್ಲಿ ಸಂ- |
ಪನ್ನನಾಗುವಭೀಷ್ಟದಲ್ಲಿ ಅನ್ನದಾನವೇ ದಾನ
ತ್ರಿಕೋಟಿಯಲ್ಲಿ |
ಪುಣ್ಯಮಾತುರ ತತ್ತತ್ಪ್ರಭೇದವಾಗಿಪ್ಪವು |
ಇನ್ನು ಇದರೊಳು ನಾನಾವಿಧವೋದನವ |
ಬಣ್ಣಿಸಲರಿದು ಅನ್ನ ಇತ್ತವನ ಕುಲಕೋಟಿ ಪಾ- |
ವನ್ನ ಸುವರ್ಣಗಾತುರರಾಗಿ ಸಂಚರಿಸುವರು |
ಪನ್ನಗಶಯನ ನಮ್ಮ ವಿಜಯವಿಠಲರೇಯಗೆ |
ಉಣ್ಣಿಸು ಬಹು ಅಧಿಷ್ಠಾನವನ್ನೆ ಚಿಂತಿಸಿ ||

ಮಟ್ಟತಾಳ

ಎಳ್ಳುಪರಿ ಅನ್ನ ಜಗದೊಳು ತಿಂಬುದು |
ಎಳಲ ಮಾಡಪಲೆ ಯಥಾರ್ಥವ |
ತಿಳಿದು ಕಾಲಕಾಲಕ್ಕೆ ಇದನೆ ಹರಿಗರ್ಪಿತವೆಂದು |
ಊಳಿಗದವನಾಗು ಉತ್ತಮರ ಸಹ |
ಬಾಲ ಯೌವನ ವೃದ್ಧಪರಿಯಂತ ನೆನೆದು |
ಕಾಲಕಾಲದಲಿ ಕೊಡುವ ವಿಚಾರವ ತಿಳಿ |
ಶೀಲಗುಣಸಾಂದ್ರ ವಿಜಯವಿಠಲರೇಯನ |
ನಾಲಿಗೆಯಿಂದಲಿ ಪೊಗಳು ಮನಮೆಚ್ಚಿ |

ತ್ರಿಪುಟತಾಳ

ತುತ್ತನ್ನ ಜ್ಞಾನಿಗೆ ಕರೆದು ಮನ್ನಿಸಿ ತಾನು |
ಚಿತ್ತಶುದ್ಧನಾಗಿ ವೈಷ್ಣವ ಭಕ್ತಿಲಿ ಇತ್ತು |
ತೃಪ್ತಿ ಬಡಿಸಿದರಾದಡೆ ಆವನಲ್ಲಿ |
ತತ್ತ್ವ ತತ್ತ್ವೇಶರು ನಾಲ್ವತ್ತಾರು ಸಂಖೆ |
ನಿತ್ಯದಲ್ಲಿ ಒಲಿದು ಶೋಭಿಸುವರು |

ಗಾತ್ರದಲ್ಲಿ ಇದ್ದ ತತ್ತ್ವಮಾನಿಗಳು |
ತೃಪ್ತರಾಗುವರನುಭವಕ್ಕೆ ಮೆಚ್ಚಿ |
ಮತ್ತೆ ಪೇಳುವೆನಯ್ಯ ವಚನ |
ತಾತ್ವಿಕರ ಗಾತ್ರದಲ್ಲಿ ಉಂಟು ಸಮಸ್ತರು |
ಅತ್ತಲಿತ್ತಲು ಗುಣಿಸು ಅವರವರ ಅವರೊಳಗೆ |
ಅತ್ಯಂತವರ ಮನಸಿಗೆ ಸಿಲುಕದು |
ಸತ್ಯವೆಂಬುದೆ ಸಿದ್ಧ ಶ್ರುತಿ ಪುರಾಣಗಳಲ್ಲಿ |
ಸ್ತೋತ್ರ ಮಾಡುವುದಕ್ಕೆ ಅಪರಿಮಿತವೊ |
ಚಿತ್ತಜನಯ್ಯನ ಮೂರ್ತಿಗಳು ಅನೇಕ |
ವೊತ್ತವಾಗಿವೆ ನೋಡು ಒಂದಾನಂತ |
ತುತಿಸಿ ಕೊಂಡಾಡಿ ಇದರಿಂದನಂತ ಜ್ಞಾನ |
ಭಕ್ತಿಯು ವಿಶೇಷ ಮಹಿಮೆಯನ್ನು |
ಇತ್ತ ಎಣಿಸುಮುನ್ನ ದಕ್ಷಿಣೋತ್ತರ ಎ- |
ಪ್ಪತ್ತು ಸಾವಿರ ಮೇಲೆ ಎರಡು ಲೆಖ್ಖ |
ಸುತ್ತಿಕೊಂಡಿಪ್ಪವು ನಾಡಿ ತದ್ಗತವಾಗಿ |
ತತ್ತ್ವಮಾನಿಗಳು ನಾರಿಯರೊಡನೆ |
ಭೃತ್ಯವತ್ಸಲ ಹರಿ ಇಂದಿರೆ ಸಮೇತ |
ತತ್ಥಳಿಸುತಿಹ ಅಪ್ರಾಕೃತನು |
ಇತ್ತಂಡ ಭಾಗದಲಿ ಸ್ತ್ರೀ ಪುರುಷನಾಗಿ ಮೂ- |
ವತ್ತಾರು ಸಾವಿರ ರೂಪದ್ವಯದಿ |
ವಿಸ್ತರಿಸುವೆ ಬ್ರಹ್ಮಾದಿಗಳು ಈ ಪ್ರಕಾರ |
ಪ್ರತ್ಯೇಕ ಪ್ರತ್ಯೇಕ ರೂಪ ಧರಿಸಿ |
ಆತ್ಮಕ್ರೀಡೆ ಆಡುತಿಪ್ಪರೊ ತಮಗೆ ತಾವೆ |
ಹತ್ತಿರ ಸತಿಗಳು ನೋಡುತ್ತಿರೆ |
ಉತ್ತಮ ಶ್ಲೋಕನು ಇದರಂತೆ ಕ್ರೀಡಿಸುವ |
ಪ್ರತ್ಯಕ್ಷ ರೂಪ ಅಧಿಷ್ಠಾನದಲ್ಲಿ |
ತುತ್ತು ತೆಗೆದುಕೊಂಬ ಜ್ಞಾನಿ ಈ ಪರಿಯಲ್ಲಿ |

ಮತ್ತು ಇಂಥಾ ಬ್ರಹ್ಮರನು ಇದರ ನೇಮವ ಮಾಡಿ |
ಚಿತ್ತದಲಿ ಪ್ರೇರಿಸಿ ಕವಳ ಮೆಲಲು ಮೆಚ್ಚಿ- |
ಸುತ್ತ ತಾತ್ತ್ವಿಕ ಜನರ ಸರ್ವೇಶನು |
ನಿತ್ಯಾಯು ಉಳ್ಳನಕ ಒಂದೊಂದು ದಿವಸಕ್ಕೆ |
ಎತ್ತ ನೋಡಿದರತ್ತ ನೋಡಿದಷ್ಟು |
ಹತ್ತು ದಿಕ್ಕಲಿ ಪತ್ತಿಸಾಗಿ ಕೂ- |
ಳಿತ್ತು ಭೋಜನ ಮಾಡಿಸಿದಧಿಕವಾಗಿ |
ಗಾತ್ರದೊಳಗೆ ಇನಿತು ಕುಟುಂಬಿಗಳಿಗೆ ಸ- |
ರ್ವತ್ರರೊಳಗೆ ಇವನೆ ತುತ್ತುಕೊಡುವ |
ಮರ್ತ್ಯನಾದರು ಇವನ ನಡೆ-ನುಡಿ ಬೇರೆ |
ಚಿತ್ತವೆ ಹರಿಯಲ್ಲಿ ನಿಲಿಸಿಹನು |
ಆತ್ಮಭೋಗದಲ್ಲಿ ತನುಸುಖಬಡುವನು |
ರಾತ್ರಿ-ಹಗಲು ಪುಣ್ಯ ಸಂಪಾದಿಪ |
ಎತ್ತಲಾದರು ಕೇಳಿ ಆವನಾದರು ಇಷ್ಟು |
ಮಾತ್ರ ಗ್ರಹಿಸಿದರು ಜೀವನ್ಮುಕ್ತ |
ಭಕ್ತಿಮಾತ್ರ ಬೇಕು ಕೊಡುವ ಕೊಂಬುವುದಲ್ಲ |
ಹತ್ತು ಕೋಟಿ ಗುಣ ಪೆಚ್ಚಿಸಲಾಗದು |
ಕೀರ್ತಿ ಬರಬೇಕೆಂದು ನೂರಾರು ಜನಕ್ಕೆ |
ಉತ್ತಮಾನ್ನ ಉಣಿಸೆ ಬರಿದೆ ಕಾಣೊ |
ಬತ್ತಲೆ ಪುರುಷನಿಂದ ಪಾಸವು ಪೋಗಿ |
ಕತ್ತಲೆಯೊಳು ಪೋಗಿ ಅಪ್ಪಿದಂತೆ |
ಸತ್ತ್ವಮೂರುತಿ ನಮ್ಮ ವಿಜಯವಿಠಲರೇಯ |
ತುತ್ತು ತೆಗೆದುಕೊಂಬ ಅಗ್ನಿಭೂಸುರರಲ್ಲಿ |

### ಅಟತಾಳ

ಇದು ಕರ್ಮ ಸತ್ತ್ವಮಾನವರಿಗೆ ಕೇವಲ |
ಇದಕ್ಕಿಂತ ಸುಲಭವಿಪ್ಪುದು ಕೇಳಿ |

ಮಧುರಾನ್ನ ಉಣ್ಣಿಸಿ ನಾನಾಬಗೆ ಪೂಜಿಸಿ |
ಮುದದಿಂದಲಿ ಒಳ್ಳೆ ಮಾತಾಡದಿದ್ದರೆ |
ಇದರೊಳಗಾವುದು ಮುಖ್ಯಾನ್ನ ಪೇಳೊ |
ಒದಗಿ ಬಂದವರಿಗೆ ಆದರವಾದರೆ |
ಹೃದಯಸಂತಾಪ ಪರಿಹಾರವಾಗೋದು |
ಇದು ಇದೆ ಮುಖ್ಯವೊ ಬಲ್ಲ ಜನರಿಗೆ ಪ್ರೀತಿ |
ಪದುಮನಾಭಗೆ ಪ್ರಸಿದ್ಧ ಅನ್ನದಿಂದ |
ಉದರತೃಪ್ತಿಯೇನು ಸುರರಿಗೆ ಬೇಕೇನೊ |
ಹದುಳ ಬೇಕಾದರೆ ಜ್ಞಾನ ಸಂಪಾದಿಸು |
ಪದೇಪದೆ ಎರಡೊಂದು ಅನ್ನದಿಂದ |
ಸದಮಲನಾಗಿ ತಾರತಮ್ಯಾನುಸಾರದಿಂದ |
ವಿಧಿ ತಪ್ಪದಲೆ ಮಹಾ ಪ್ರೀತಿಗೈಸುವುದು |
ಇದರ ತರುವಾಯ ಮಿಗಿಲಾದ ಉಪಚಾರ |
ಉದಕದಿಂದಲಿ ಸರ್ವ ಸಾಧನವಿದ್ದಂತೆ |
ಉದ್ಭವಿಪುದು ಕಾಣೊ ಜ್ಞಾನ ಅಧಿಕವಾಗಿ |
ಇದನೆ ತೊರೆಯದಿರು ಜ್ಞಾನಂಗಡನಾಗು |
ಪದವಿಗೆ ಸೋಪಾನ ಹೊರಿಯನುಕಂಪನ |
ಮುದದಿಂದ ಕರ್ಮ ಅನ್ನಂಗಳಿಂದ |
ಇದರಂತೆ ಪದುಮಸಂಭವ ಪ್ರೀತಿ ಆಗನು ಕಾಣೊ |
ಯದುಕುಲೋತ್ತಮ ಕೃಷ್ಣ ವಿಜಯವಿಠಲರೇಯ |
ಬದಿಯಲ್ಲಿ ವಾಸವಾಗಿಪ್ಪ ಭಯನಾಶ |

ಆದಿತಾಳ

ದಾನದೊಳಗೆ ದಾನ ಮಾನಸದೊಳಗೆ ಹರಿಯ |
ಧ್ಯಾನಮಾಡಿ ಮೆಚ್ಚಿಸುವ ಇದೆ ಮಹಾದಾನ ಕಾಣೊ |
ಏನೇನು ಮಾಡಿದರೆ ಇದಕೆ ಸರಿಯಿಲ್ಲ |
ಅನಂತಕಾಲಕ್ಕು ಎಣಿಸಿ ಎಣಿಕೆ ಮಾಡೆ |

ಕಾಣಿ ಮೊದಲಾದ ದ್ರವ್ಯ ಧಾವತಿಯಿಲ್ಲ |
ದೀನನಾಗಿ ದೇಶ ಸಂಚರಿಸುವುದಲ್ಲ ಸಾಲ- |
ವನ್ನು ಮಾಡಿ ಬೆಲೆಗೆ ತರುವುದಲ್ಲ |
ಮಾನವ ಕೇಳು ಮನವೆಂಬನ್ನದಾನ |
ಶ್ರೀನಾಥನಿಗಿಂತ ಇನ್ನು ಸತ್ಪಾತ್ರ ಆವವನು |
ಕ್ಷೋಣಿಯೊಳಗೆ ಇದು ನಂಬು ನೆರೆನಂಬು |
ಮಾಣದೆ ಷಡುವಿಧ ಅನ್ನ ಇದರ ತರುವಾಯು |
ದಾನಿಗಳರಸ ವಿಜಯವಿಠಲರೇಯು |
ಜ್ಞಾನವಂತರ ಶುದ್ಧ ಮಾನಸದಲ್ಲಿ ನಲಿವ |

ಜತೆ

ಅನ್ನದಾನವ ಮಾಡು ಜ್ಞಾನಪೂರ್ವಕದಿಂದ |
ಚಿನ್ಮಯಮೂರುತಿ ವಿಜಯವಿಠಲನ್ನ ಮೆಚ್ಚಿಸು ನಿತ್ಯ ||

## ಧನ್ವಂತರಿ ಮಹಿಮೆ

### ಧ್ರುವತಾಳ

ಆಯುವೃದ್ಧಿ ಆಗುವುದು ಯಶಸ್ಸು ಬರುವುದು |
ಕಾಯ ನಿರ್ಮಲನ ಕಾರಣವಹುದು |
ಮಾಯ ಹಿಂದಾಗುವುದು ನಾನಾ ರೋಗದ ಬೀಜ
ಬೇಯಿಸಿ ಕಳೆವುದು ವೇಗದಿಂದ |
ನಾಯಿ ಮೊದಲಾದ ಕುಚ್ಛಿತ ದೇಹ ನಿ- |
ಕಾಯವ ತಿತ್ತು ದುಷ್ಕರ್ಮದಿಂದ |
ಕ್ರಿಯಮಾಣ ಸಂಚಿತ ಭರಿತವಾಗಿದ್ದ ದುಃಖ |

ಹೇಯಸಾಗರದೊಳು ಬಿದ್ದು ಬಳಲಿ ।
ನೋಯಿಸಿಕೊಂಡು ನೆಲೆಗಾಣದೆ ಒಮ್ಮೆ ತನ್ನ ಬಾಯಲಿ ।
ವೈದ್ಯಮೂರುತಿ ಶ್ರೀ ಧನ್ವಂತರಿ ।
ರಾಯರಾಜ ಔಷಧಿಸಿಯಾಮಕ ಕರ್ತೃ ।
ಶ್ರೀಯರಸನೆ ಎಂದು ಬಯಸಲಾಗಿ ।
ತಾಯಿ ಒದಗಿ ಬಂದು ಬಾಲನ್ನ ಸಾಕಿದಂತೆ ।
ನೋಯಗೊಡದೆ ನಮ್ಮನು ಪಾಲಿಸುವ ।
ಧೈರ್ಯ ದೇವಾದಿಗಳಿಗೆ ಧರ್ಮಗ ಗುಣಸಾಂದ್ರ ।
ಶ್ರೇಯಸ್ಸು ಕೊಡುವನು ಭಜಕರಿಗೆ ।
ಮಾಯ-ಮಂತ್ರದಿಂದ ಜಗವೆಲ್ಲ ವ್ಯಾಪಿಸಿ ಸ- ।
ನ್ಯಾಯವಂತನಾಗಿ ಚೇಷ್ಟೆ ಮಾಳ್ಪ ।
ವಾಯುವಂದಿತ ನಿತ್ಯ ವಿಜಯವಿಠಲರೇಯ ।
ಪ್ರಿಯನು ಕಾಣೋ ನಮಗೆ ಅನಾದಿ ರೋಗ ಕಳೆವ ॥

ಮಟ್ಟತಾಳ

ಧನ್ವಂತರಿ ಸಿರಿ ಧನ್ವಂತರಿಯೆಂದು ।
ಸನ್ನುತಿಸಿ ಸತತ ಭಿನ್ನ ಜ್ಞಾನದಿಂದ ।
ನಿನ್ನವ ನಿನ್ನವನೆಂದು ಘನತೆಯಲಿ ನೆನೆದ ಮನುಜ
ಘನ್ನಮೂರುತಿ ಒಲಿದು ನಲಿವ ಭು- ।
ವನದೊಳು ಧನ್ಯನು ಧನ್ಯನೆನ್ನಿ ।
ಚನ್ನಮೂರುತಿ ಸುಪ್ರಸನ್ನ ವಿಜಯ ವಿಠ- ।
ಲನ್ನ ನಿತ್ಯವೆಂದು ಬಣ್ಣಿಸು ಬಹುವಿಧದಿಂದ ॥

ತ್ರಿಪುಟತಾಳ

ಶಶಿಕುಲೋದ್ಭವ........ದೀರ್ಘ........ನಂದನದೇವ
ಶಶಿವರ್ಣ ಪ್ರಕಾಶ ಪ್ರಭುವೆ ವಿಭುವೆ

ಶಶಿಮಂಡಲ ಸಂಸ್ಥಿತ ಕಲಶಪಾಣಿ |
ಬಿಸಜಲೋಚನ ಆಶ್ವಿನೇಯ ಮಧ್ಯ |
ಶಶಿಗರ್ಭ ಭೂರುಹ ಲತೆ ಪೊಡೆ ರೋಗವ ತಾ ಓಡಿಸುವ |
ಓಷಧಿ ತುಲಸಿಜನಕ ವಸುದೇವ |
ಅಸುರ ನಿರ್ಜರತತಿ ನೆರೆದು ಗಿರಿಯ ತಂದು |
ಮಿಸುಕದೆ ಮಹೋದಧಿ ಮಥಿಸಲಾಗಿ |
ನಸುನಗುತ ಪುಟ್ಟಿದೆ ಪಿಯೂಷ ಘಟ ಧರಿಸಿ |
ಅಸಮ ದೈವವೆ ನಿನ್ನ ಮಹಿಮೆಗೆ ನಮೋ ನಮೋ |
ಬಿಸಜಸಂಭವ ರುದ್ರ ಮೊದಲಾದ ದೇವತೆ |
ಋಷಿನಿಕರ ನಿನ್ನ ಕೊಂಡಾಡುವರು |
ದಶದಿನದೊಳು........ರ........ವಿಜಯವಿಠಲ |
ಭೀಷಣ ಅಸು ಇಂದ್ರಿಯಗಳ ರೋಗ ನಿವಾರಣ ||

## ಅಟತಾಳ

ಶರಣು ಶರಣು ಧನ್ವಂತರಿ ತಮಗುಣನಾಶ |
ಶರಣು ಆರ್ತಜನ ಪರಿಪಾಲಕ ದೇವ |
ತರುವೆ ಭವತಾಪ ತರಣ ದಿತಿಸುತಹರಣ ಮೋಹಕಲ್ಪ |
ಪರಮಪೂರ್ಣ ಬ್ರಹ್ಮ ಬ್ರಹ್ಮಉದ್ಧಾರಕ
ಉರುಪರಾಕ್ರಮ ಉರಗಶಾಯಿ |
ವರಕಿರೀಟ ಮಹಾಮಣಿ ಕುಂಡಲಕರ್ಣ |
ಮಿರುಗುವ ಹಸ್ತಕಂಕಣ ಹಾರಪದಕ |
ಹೀರ ಕಾಂಚಿ ಪೀತಾಂಬರ ಚರಣಭೂಷ |
ಸಿರಿವತ್ಸಲಾಂಛನ ವಿಜಯವಿಠಲಪ್ರಿಯ |
ತರುಣಗಾತ್ರ ಜ್ಞಾನ ಮುದ್ರಾಂಕಿತ ಹಸ್ತ ||

ಆದಿತಾಳ

ಏಳುವಾಗಲಿ ಮತ್ತೆ ತಿರುಗಿ ತಿರುಗುವಾಗಲಿ |
ಬೀಳುವಾಗಲಿ ನಿಂದು ಕುಳ್ಳಿರುವಾಗಲಿ |
ಹೇಳುವಾಗಲಿ ಮಾತು ಕೇಳುವಾಗಲಿ ಕರೆದು |
ಪೇಳುವಾಗಲಿ ಹೋಗಿ ಸತ್ಕರ್ಮ ಮಾಡುವಾಗಲಿ |
ಬಾಳುವಾಗಲಿ ಭೋಜನ ನಾನಾ ಷಡ್ರಸಾನ್ನ ಸ- |
ಮ್ಮೇಳವಾಗಲಿ ಒಮ್ಮೆ ಪುತ್ರಾದಿಗಳೊಡನೆ |
ಕೇಳಿ ಮಾಡಲಿ ಮನುಜ ಮರಿಯಾದೆ ತನ್ನಯ |
ನಾಲಿಗೆ ಕೊನೆಯಲ್ಲಿ ಧನ್ವಂತರಿ ಎಂದು ಒಮ್ಮೆ |
ಕಾಲಕಾಲದಲ್ಲಿ ಸ್ಮರಿಸಿದರೆ ಆವಾಗ |
ವೇಳೆವೇಳೆಗೆ ಬಹ ಭವಬೀಜ ಪರಿಹಾರ |
ನೀಲಮೇಘಶ್ಯಾಮ ವಿಜಯವಿಠಲರೇಯ |
ಓಲಗ ಕೊಡುವನು ಮುಕ್ತರ ಸಂಗದಲ್ಲಿ ||

ಜತೆ

ಧನ್ವಂತರೀ ಧನ್ವಂತರೀ ಎಂದು |
ಪ್ರಣವ ಪೂರ್ವಕದಿಂದ ವಂದಿಸಿ |
ನೆನೆಯಲು ವಿಜಯವಿಠಲ ಒಲಿವ ||

## ಸ್ವಾತಂತ್ರ್ಯ ಸುಳಾದಿ

ಧ್ರುವತಾಳ

ನಾನಲ್ಲ ನನ್ನದಲ್ಲ ನಾನಾ ಕ್ರಿಯ ಕರ್ಮಗಳು
ಅನಾದಿಯಿಂದ ಎನಗೆ ಕರ್ಮದಾಧಾರ ಮಾಡಿ

ಹಾನಿವೃದ್ಧಿಗಳೆಲ್ಲ ಕಲ್ಪಿಸಿ ಕಂಗೆಡಿಸಿ |
ಯೋನಿ ಯೋನಿಗಳಲ್ಲಿ ಜನಿಸಿ ಜನಿಸಿ |
ನೀನೆ ಈ ದೇಹದೊಳು ವ್ಯಾಪ್ತಬಲ್ಲಿದನಾಗಿ |
ನಾನೆಂಬೋದು ನುಡಿಸಿ ತಿಳಿಯಗೊಡದೆ |
ನಾನಾ ನರಕದೊಳು ಹಾನಿ ನೋಡುತಲಿದ್ದು |
ಬೇನೆ ಬಡಿಸುತಿಪ್ಪೆ ಬಲು ವಿನೋದ |
ತ್ರಾಣವಂತನೆಂದರೆ ನೀನಲ್ಲದಿನ್ನಿಲ್ಲ ಗೀ- |
ರ್ವಾಣಾದ್ಯಮರರ ಮಧ್ಯದಲ್ಲಿ ನೋಡೆ |
ಪ್ರಾಣನಾಗಿದ್ದು ಎನ್ನ ದುಃಖ ಸ್ವ- |
ಪ್ಪನ್ನ ಮಾಡಿ ನಿರಂತರ ಇನಿತು ಮಾಡಿಸಿದೆ |
ಏನೆಂಬೆನಯ್ಯ ನಿನ್ನ ಮಹಾ ವ್ಯಾಪಾರಕ್ಕೆ |
ನಾನಿದ್ದೆ ಪೂರ್ವದಲ್ಲಿ ಪ್ರಕೃತಿಯೊಡನೆ |
ಜ್ಞಾನಾಜ್ಞಾನ ಎರಡೂ ನಿನ್ನಾಧೀನವಾಗಿರೆ |
ನಾನು ನನ್ನದು ಎಂಬ ಉತ್ತರಗಳ |
ಹೀನ ಉತ್ತಮವಾದ ನುಡಿಗಳ ನುಡಿಸದಲೆ |
ಮೌನದಿಂದಿರೆ ಇಂತಾಗುವುದೇನೊ |
ನೀನು ನುಡಿಸಲು ನುಡಿವೆ ನೀ ನಡೆಸಲು ನಡೆವೆ |
ಈ ನುಡಿ ಪಿರಿಯರು ಪೇಳುವರೊ |
ಶ್ರೀನಿವಾಸ ರಂಗ ವಿಜಯವಿಠಲರೇಯ |
ಕಾಣಿಸಿಕೊಳ್ಳದಲೆ ಇನಿತು ಸುತ್ತಾಡಿಸುವ |

### ಮಟ್ಟತಾಳ

ಎನಗೆ ಕರ್ತೃತ್ವವು ಕೊನೆಮಾತು ಉಂಟು
ಅನುದಿನ ನಿನ್ನಾಧೀನವೆಂಬೊ ಮಾತು |
ಸನುಮತವೆ ಸರಿ ಸನಕಾದಿಗಳೊಡೆಯ |
ಇನಿತಾದರು ನೀನೆ ಎನಗೆ ಪ್ರೇರಿಸದಲೆ |

ಆನು ಬಲ್ಲೆನೆ ಸ್ವಾಮಿ ಘನ್ನಮಹಿಮ ದೇವ |
ಕನಸಿನಲ್ಲಿ ಮನಸಿನಲ್ಲಿ ಕನವರಿಸಿದಾಗ |
ಅನಿಮಿಷ ದಾನವಗಣದ ಜೀವಗಳೊಳು |
ಮನೆಮಾಡಿಕೊಂಡಿದ್ದು ಕ್ಷಣ ಕ್ಷಣಕ್ಕೆ ಪ್ರೇ- |
ರಣೆ ಮಾಡಿ ಇವರಿಂದಲೆ ಘನ |
ಪುಣ್ಯ-ಪಾಪವ ಮಾಡಿಸಿ ಅದನೆ |
ಅನುಭವಿಸುವ ಮಾಯವನ್ನು ನೇಮಿಸಿ ನಡೆವ |
ಘನ್ನ ಕೃಪಾನಿಧಿಯೆ ಎಣೆಗಾಣೆನೊ |
ನಿನ್ನ ಮನ ಉತ್ಸಾಹಕ್ಕೆ ಅಣುವೊಳಗೆ ಮ- |
ತ್ತಣು ವಿಜಯವಿಠಲರೇಯ |
ಘನಘನ ಮಹಾಘನ ಘನವಾದವೊ ದೈವಾ |

ತ್ರಿಪುಟತಾಳ

ಹಲವು ಜನರು ಕೇಳಿ ಹರಿಪೂರ್ಣ ಶಕುತಿಯು |
ಬಲುಪರಿ ಪೊಗಳಲು ಸವೆಯದಯ್ಯ |
ಒಳಹೊರಗೆ ತಾನೆ ಪೂರ್ಣ ವ್ಯಾಪ್ತನಾಗಿ |
ಕೆಲಕಾಲ ನಡೆಸುವ ತೊಲಗದಲೆ |
ಹಲವು ಜೀವಿಗಳ ಶಕ್ತಿ ಎಣಿಸಿದರಲ್ಲೇನು |
ಫಲವಿಲ್ಲವೊ ಕಾಣೊ ಕಂಡ ಮಾತು |
ತಿಳಿಯೊಲಿದು ಸೃಷ್ಟಿಲಿ ತಾತ್ವಿಕರು ಕೂಡಿ |
ನೆಲೆಗಾಣದೆ ಪೋದರ್ಯಾಕೆ ಕೇಳೊ |
ಮಲೆತು ಎದುರು ನಿಂತ ಶಕ್ತ ಮಹಾರುದ್ರನ್ನ |
ಚಲಿಸದಂತೆ ಮಾಡಿ ನಿಶ್ಚೇಷ್ಟದಿ |
ನಿಲಿಸಿದ ನೋಡು ಮಹಾ ಬಲವಂತ |
ಅಳಿಸಿ ಬಿಡುವ ತಾನೆ ವಾಳ್ಪ ಮಾಟ |
ಜಲಧಿಶಯನನು ಒಲಿದು ಹಗೆಯಿಂದ ಕೊಲ್ಲುವನೆಂದರೆ |

ಅಲ್ಲಿ ಲೇಶಮಾತ್ರ ಪುಸಿ ಮಾತೇನುಂಟು ಯೋಚಿಸಿ
ನೋಡಿದರೆ |
ಸುಲಭ ಜಗತ್ಪಾಲ ದೇವೇಶನು |
ನೆಲದ ಮೇಲೆ ಶಿಶು ಬೀಳುವಾಗಲದಕ್ಕೆ |
ತಿಳಿದು ನೋಡಿದರೇಸು ಸ್ವತಂತ್ರವೋ |
ನೆಲೆಯಾಗಿಪ್ಪೋದು ಅಷ್ಟನಾದರು ಕೇ- |
ವಲ ಹರಿಯಧೀನವೆನ್ನಿ ಬಿಡದೆ |
ಗಲಭೆಯೊಳಗೆ ವಾಸ ವಿಜಯವಿಠಲರೇಯ |
ಉಳುಹಲು ಉಳಿವೆನು ಸತ್ಯಸಂಕಲ್ಪನು ||

ಅಟತಾಳ

ಸುಜನರ ಕೈಯಿಂದ ಪಾಪವ ಮಾಡಿಸಿ |
ನಿಜ ಬುದ್ಧಿಯನು ಕೊಟ್ಟು ಸದ್ಗತಿಯ ಪಾಲಿಪೆ |
ಕುಜನರ ಕೈಯಿಂದ ಸತ್ಪುಣ್ಯ ಮಾಡಿಸಿ |
ಭಜನೆಯ ಕಂಗೆಡಿಸಿಯೈದಿಸುವೆ ಪಾಪದುರ್ಗ |
ಸುಜನಕ್ಕೆ ಕುಜನಕ್ಕೆ ದೃಷ್ಟಾಂತವು ಉಂಟು
ಅವನಿಯೊಳು ಇದು ಸಿದ್ಧಾಂತವೊ |
ಅಜಮಿಳನ ನೋಡು ಕೆಟ್ಟು ಹೋಗಿದ್ದರು |
ಅಘದೂರನ ಮಾಡಿ ಹರಿ ಕಾಯಿದ |
ಕುಜನ ಬುದ್ಧರು ಸನ್ಮಾರ್ಗದೊಳಿದ್ದರು ದ- |
ನುಜರಿಪು ಬದ್ಧನಾಗಿ ಕಂಗೆಡಿಸಿದ |
ಗಜವರದ ಇಂತೇಕೆ ಮಾಡಿದನೆನೆ |
ಅಜನ ಪಿತನ ಇಚ್ಛೆ ಅಂಥಾದ್ದೆ |
ಅಜರ ವೈಚಿತ್ರಿಕ ಲೋಕ ವಿಜಯವಿಠಲರೇಯ |
ನಿಜ ಇಚ್ಛೆ ನಿಜ ಕ್ರಿಯಾ ||

ಆದಿತಾಳ

ತನಗೆ ತಾನೆ ತರ್ಕೈಸಿ ಖಳರಿಗೆ ಕ್ಲೇಶವ ಕೊಡುವ |
ಅನಿಮಿಷರಿಗೆ ಪ್ರಿಯ ದನುಜರಿಗಪ್ರಿಯ |
ಅನುದಿನ ಅವರವರ ಜನನ-ಮರಣ ಪರಿಯಂತ |
ಸೂರ್ಯವಂಶ ರಾಮ ಭೃಗುವಂಶ ರಾಮ- |
ನೆನಿಸಿಕೊಂಡು ಕಾದು ಖಳರ ಸಂಹರಿಸಿದ |
ಅನುಮತರಾದ ಜನರ ಇದರಂತೆ ಪಾಲಿಸುವ
ಹರಿಯ ಪಾದ ಭಕುತಿ ಬಲ್ಲವರು |
ಎನಗೆ ಆವ ಸ್ವತಂತ್ರವೋ ಇದ್ದರಾದರು ಪ್ರಯೋ- |
ಜನಕ್ಕೆ ಬಾರದಿರೆ ಇದ್ದರೂ ಇಲ್ಲ ಕಾಣೊ |
ವನಜನಾಭನು ತಾನೆ ಸ್ವಾತಂತ್ರ್ಯ ತೆಗೆದು ಕೊ- |
ಟ್ಟನು ಎಂದು ವೇದದಲ್ಲಿ ಸಾರಿ ಪೇಳುತಲಿದೆ |
ಎನಗೆ ಮೊದಲೇ ಇಲ್ಲ ಇತ್ತನೆಂಬಲ್ಲಿ |
ತಾನೆ ಕರ್ಮಿ ಎಂದು ಯೋಚನೆ ಪುಟ್ಟುತಿದೆ |
ದಿನದಿನದಲ್ಲಿ ಕರ್ಮ ಆಚರಣೆ ಮಾಡಿಸಿ ಉಳಿಸುವ ಬಗೆ
ಮತ್ತಾವುದೊ ತಿಳಿಯದು |
ಗುಣನಿಧಿ ಧೀರಮೂರ್ತಿ ವಿಜಯವಿಠಲರೇಯ |
ಮಣಿದು ನಮೋ ಎಂಬೆ ಆನಂದ ಉಂಬೆ ||

ಜತೆ

ನಿನ್ನ ಸ್ವಾತಂತ್ರ್ಯವ ಒಲ್ಲೆನೆಂದರೆ ಬಿಡದೊ |
ನಾನೇ ನಿನ್ನವನಯ್ಯ ವಿಜಯವಿಠಲರೇಯ ||

## ೧೦

## ಪುರಂದರದಾಸರ ಸ್ತೋತ್ರ

### ಧ್ರುವತಾಳ

ದಾಸಪುರಂದರನ ಪಾದವನ್ನು ಪೊಂದಿದೆನೋ |
ಏಸು ಜನುಮದ ಪುಣ್ಯರಾಶಿ ಫಲಿಸಿತೋ ಎನಗೆ |
ಕಾಸಿಗಾಗದವನು ಸಾಸಿರಕೆ ಬೆಲೆಯಾದೆ |
ಸೂಸುವ ಭಕುತಿಯಲ್ಲಿ ಶ್ರೀಶನ ನಾಮ ಪೀ- |
ಯೂಷವನ್ನುಂಡೆನೋ ಉಚಿತ ಸಾಧನದಿಂದ |
ಲೇಸಾಗಿ ಪುರಂದರದಾಸರನು ಪಾಲಿಸಿದ |
ಸಾಸಿರಪಾದ ನಮ್ಮ ವಿಜಯವಿಠಲನ |
ದಾಸರ ದಾಸನಾದೆ ದೋಷವಿರಹಿತನಾದೆ ||

### ಮಟ್ಟತಾಳ

ಇಂದಿನ ದಿನವಾನಂದದ ದಿನವು |
ಇಂದಿನ ದಿನವೂನಂದದ ದಿನ ಪು- |
ರಂದರದಾಸರು ಇಂದುವಿನಂತೆ |
ಬಂದೆನ್ನ ಕಣ್ಣಮುಂದೀಗ ಸುಳಿಯಲು |
ಸಂದರುಶನದಿಂದ ದಣಿದೆನಾ ರಂಗವರದ ಪು- |
ರಂದರವಿಠಲ ಕರುಣಾ |
ಸಿಂಧುವಿನೊಳಗೆ ನಿಂದೆನೊ ಪೊಂದಿದೆನೋ ||

### ತ್ರಿಪುಟತಾಳ

ಸುರಲೀಲನಾಗಿ ನಿಕಂಪನೆಂದೆನಿಸೆ ದ್ವಾ- |
ಪರದಲ್ಲಿ ಜನಿಸಿದೆ ಕೆಲವು ದಿನ ಬಿಡದೆ |

ಶರುವಾಯು ವರ ಕಲಿಯುಗದಲ್ಲಿ ನನಗೆ |
ಜನನ-ಮರಣವಾಗುತ ಬಂದು ಧರೆಯೊಳಗೆ ಮೆರೆದು |
ಹರಿಕೃಪೆಯಿಂದಲಿ ಇವರ ಸದನದೊಳು |
ತುರುಕರುವಾಗಿ ಜನಿಸಿದೆ ಸುಕೃತದಿಂದ |
ಸಿರಿಪತಿಸ್ಥವಿಷ್ಣು ನಮ್ಮ ವಿಜಯವಿಠಲನ ದಾ- |
ಸರು ಪೇಳುವ ಕವನವೆರಗಲು ಕರ್ಣಕ್ಕೆ ||

ಅಟತಾಳ

ಶ್ರವಣಫಲದಿಂದ ಅವನಿಯೊಳಗೆರಡು |
ಅವನಿಸುರರ ಜನ್ಮವನೀಗ ಧರಿಸಿದೆ |
ಕವನ ಪೇಳದೆ ಸಂಸಾರದಲಿದ್ದವಸರನಾಗಿ |
ಅವಧಿಯಿಲ್ಲದೆ ಈ ಅವನಿಯೊಳಗೆ ಬಂದೆ |
ಭವದೂರ ಕಲಿನಾಮ ವಿಜಯವಿಠಲನ ದಿವ್ಯ ನಾ- |
ಮವನು ಕೊಂಡಾಡುವ ಅಧಿಕಾರಿ ನಾನಾದೆ ||

ಆದಿತಾಳ

ಎಪ್ಪತ್ತುಮೂರು ವರ್ಷ ಹೊದ್ದದೇಹದಲಿದ್ದೆ |
ಇಪ್ಪಕಾಯದಲಡರಪ್ಪಂದೆ ಬಾಳಿ ತಿರುಗಿ |
ಇಪ್ಪತ್ತೊಂದುದಿನ ತಪ್ಪದಲೆ ಸುಲಭ ನರಕ |
ವಪ್ಪದಲೆ ನೋಡಿ ತಿರುಗಿ ಬಪ್ಪೆನಯ್ಯಾ ಧರೆಗೆ |
ಅಪ್ಪಾನಪ್ಪ ಮಹಿಭರ್ತ ವಿಜಯವಿಠಲ ಒಲಿ- |
ದಿಪ್ಪನು ಇಂದಿನಕ್ಕಿಂತಧಿಕವಾಗಿ ಬಿಡದೆ ||

ಜತೆ

ಗುರುಕೃಪೆಯಿಂದಲಿಯರಿಕೆನೀ ತೆರದಿಂದ |
ಪರಮಾರ್ಥ ವಿಜಯವಿಠಲನಂಘ್ರಿ ಸೇರಿದೆನೊ ||

೧೧

## ವಿಷ್ಣುಪಾದ ಮಹಾತ್ಮ್ಯ

ರಾಗ— ಭೈರವಿ ಧ್ರುವತಾಳ

ಜಗವೆಲ್ಲ ವ್ಯಾಪಿಸಿದ ಬಲು ಅತೀಂದ್ರಿಯ ಪಾದ |
ಪಗೆಗಳ ಮಸ್ತಕಾದ್ರಿಗೆ ವಜ್ರಪ್ರಹಾರ ಪಾದ |
ಝುಗಝುಗಿಸುವ ಪರಮ ಮಂಗಳಖಣಿಯ ಪಾದ |
ನಿಗಮಾವಳಿಗೆ ಇದು ನಿಲುಕದ ಪಾದ |
ಅಗಣಿತಗುಣಪೂರ್ಣ ಸೌಮ್ಯಪಾದ |
ತ್ರಿಗುಣಾತೀತವಾದ ಶೃಂಗಾರಸಿಧಿ ಪಾದ |
ಗಂಗಾನದಿಯ ಪೆತ್ತ ಗಂಭೀರ ಪಾದ |
ಖಗರಾಜನ ದಿವ್ಯ ಪೆಗಲಲ್ಲಿ ಪೊಳೆವ ಪಾದ |
ಯುಗಯುಗದಲ್ಲಿ ಇಲ್ಲಿ ಪೂಜೆಗೊಂಬ ಪಾದ |
ಬಗೆಬಗೆ ವರಗಳ ಕೊಡುವ ಪಾದ |
ಮಿಗೆ ಸಾಹಸವುಳ್ಳ ಮಿಸುಣಿಯಾಭರಣ ಪಾದ |
ಅಘದೂರ ಪಾದ ಅತಿ ಚಿತ್ರಪಾದ |
ನಗವೈರಿನುತ ನಮ್ಮ ವಿಜಯವಿಠಲ ಪ- |
ನ್ನಗಶಾಯಿಯ ಪಾದ ವಿಷ್ಣುಪಾದ |

ಮಟ್ಟತಾಳ

ಧರ್ಮಶಿಲೆಯ ಮೇಲೆ ಮೆರವಣಿಯ ಪಾದ |
ಕರ್ಮಖಂಡನೆ ಮಾಳ್ಪ ಕಲುಷವಿಗತ ಪಾದ |
ಶರ್ಮವರ್ಮಮರ್ಮ ಕರ್ಮಸಂಗದ ಪಾದ |
ಪೇರ್ಮೆಯುನ್ನತವಾದ ಪ್ರೇಮಭರಿತ ಪಾದ |
ಕೂರ್ಮರೂಪ ನಮ್ಮ ವಿಜಯವಿಠಲದೇವ |
ಧರ್ಮಮೂರುತಿಯ ಪಾದ ಸಿರಿಪಾದ |

ತ್ರಿಪುಟತಾಳ

ಧರಾಕಾಶದಲ್ಲಿ ಮಿಂಚುವ ಘನಪಾದ |
ಬಹುಗಮನವಾಗಿದ್ದ ಭಾಗ್ಯಪಾದ |
ಅಹೋರಾತ್ರಿಯಲಿ ಬಿಡದ ಆನಂದದ ಪಾದ |
ಮಹಪುಣ್ಯ ತಂದೀವ ಮಂತ್ರಪಾದ |
ದ್ರೋಹಿಮಾನವರಿಗೆ ದೂರವಾದ ಪಾದ |
ಗಹನವಾದ ಪಾದ ಗುಪ್ತಪಾದ |
ಸ್ನೇಹ ಭಾವದಿಂದ ಸಾಕುವ ನಿಧಿ ಪಾದ |
ರಹಸ್ಯವಾಗಿ ಜಪಿಸುವ ಪಾದ |
ತ್ರಾಹಿ ತಾವರೆನಯನ ವಿಜಯವಿಠಲ ಸರ- |
ಸೀರುಹ ಪೋಲುವ ಪಾದ ಅರ್ಜಪಾದ |

ಅಟತಾಳ

ಅಸುರ ಗಯನ ಶಿರದಲ್ಲಿ ನಿಂದ ಪಾದ |
ಎಸೆವ ಹದಿನೆಂಟು ಪಾದದೊಳಿಪ್ಪ ಪಾದ |
ಶಶಿಮುಖಿ ಗೋಪೆಯರ ಮನಕೆ ಮೋಹನ ಪಾದ |
ವಶವಾಗಿ ಭಕ್ತರ ಬಳಿಯಲಿಪ್ಪ ಪಾದ |
ವಿಷವರ್ಜಿತ ವಿಲಕ್ಷಣ ಪಾದ |
ಬೆಸನ ಲಾಲಿಸಿ ಲಾಲನೆ ಮಾಡುವ ಪಾದ |
ಅಸಮ ದೈವ ನಮ್ಮ ವಿಜಯವಿಠಲರೇಯ |
ಪೆಸರಾದ ಪಾದ ಪರಮಸೌಖ್ಯಪಾದ |

ಆದಿತಾಳ

ಎಲ್ಲರಿಂದಲಿ ಪಿಂಡ ಹಾಕಿಸಿಕೊಂಬ ಪಾದ |
ಮಲ್ಲ ಮೊದಲಾದವರ ಖಳರ ಜೈಸಿದ ಪಾದ |
ಮೆಲ್ಲಮೆಲ್ಲನೆ ಶುದ್ಧ ಸ್ತೋತ್ರ ಕೈಕೊಂಬ ಪಾದ |

ಸಲ್ಲಲಿತ ಪಾದ ಸರ್ವ ಸಾಕಾರ್ಯ ಪಾದ |
ಎಲ್ಲೆಲ್ಲಿ ನೋಡಿದರು ವ್ಯಕ್ತವಾದ ಪಾದ |
ಬಲ್ಲಿದ ಹರಿ ನಮ್ಮ ವಿಜಯವಿಠಲರೇಯ |
ವಲ್ಲಭನ ಪಾದ ವಜ್ರಾಂಕಿತ ಪಾದ |

ಜತೆ

ಫಲ್ಗುಣೀ ತೀರದಲಿ ಮೆರೆವ ಮಹತ್ ಪಾದ |
ಫಲ್ಗುಣ ಸಾರಥಿ ವಿಜಯವಿಠಲನ ಪಾದ ||

೧೨

## ಗಯಾ ಮಹಾತ್ಮ್ಯ

ಧ್ರುವತಾಳ

ಶ್ರೀಗಯದಾ ಯಾತ್ರೆ ಮಾಡಿ ಸಿದ್ಧ ಸಾಧ್ಯಾ ಮಾನವರು |
ಆಗಮೋಕ್ತಿಯಿಂದ ತಿಳಿದು ನೋಡಿ |
ಭೋಗದಾಶೆ ಬಿಟ್ಟು ಭಕುತಿ ಮಾರ್ಗದಿಂದ |
ಯೋಗಿ ಜನರ ಸಂಗಡದಿಂದಲೀ |
ಯಾಗ ಮೊದಲಾದ ಕರ್ಮಕಲಾಪಂಗಳು |
ತ್ಯಾಗ ಮಾಡಿದರು ದೋಷವಿಲ್ಲ |
ಸಾಗಿಬಂದು ಇಲ್ಲಿ ನೂರೊಂದು ಕುಲವ ಲೀ- |
ಸಾಗಿ ಉದ್ಧರಿಸಬೇಕು ತ್ರಿಕರಣದಿ |
ಭಾಗಾದಿಯಾದವ ದ್ವೇಷದಿಂದಲಿ ಬರ- |
ಲಾಗಿ ಮುಕ್ತಿಯುಂಟು ಪಿತ್ರಾದಿಗೆ |
ಈಗಲಾಗೆನ್ನದಿರಿ ಕಂಡ ಮಾತ್ರಕೆ ಬಲು !
ವೇಗದಿಂದಲಿ ನರಕ ದೂರಾಗೋವು |

ಸಾಗರಶಾಯಿ ನಮ್ಮ ವಿಜಯವಿಠಲನಂಘ್ರಿ ।
ಜಾಗುಮಾಡದೆ ನೆನಿಸೆ ಸಮಸ್ತ ಕಾರ್ಯಸಿದ್ಧಿ ।

ಮಟ್ಟತಾಳ

ಪರಮಪ್ರೀತಿಯಿಂದ ಫಲ್ಗುಣಿ ಶ್ರಾದ್ಧವನು ।
ವಿರಚಿಸಿ ವಿನಯದಲಿ ಪ್ರಥಮ ದಿವಸದಲ್ಲಿ ।
ತರುವಾಯ ಕಮಲಾಸನ ತೀರ್ಥಪ್ರೇತ ಶಿಲೆಯು
ಚರಿಸಿ ಚತುರನಾಗಿ ।
ಎರಡನೆ ಸ್ಥಾನದಲಿ ರಾಮಪರ್ವತರಾಮಾ
ಸರೋವರ ಕಾಕಬಲಿ ।
ಎರಡೆರಡು ಒಂದು ಸ್ಥಳವೊಂದೆ ದಿವಸಾ ।
ಕರಣಶುದ್ಧಿಯಿಂದ ಪಿಂಡಪ್ರದಾನವಗೈದು ।
ಸುರಸಾರ್ವಭೌಮ ವಿಜಯವಿಠಲ ಗದಾ- ।
ಧರನ ಪ್ರೀತಿಯಬಡಿಸಿ ಕುಲವನು ಉದ್ಧರಿಸಿ ।

ರೂಪಕತಾಳ

ಉತ್ತರಮಾನಸ ಕನಕತೀರ್ಥ ಸೂರ್ಯ ।
ಉತ್ತರ-ದಕ್ಷಿಣ ಮಾನಸಾಮಧು ಕುಲ್ಯ ।
ಸತ್ಯವಾಗಿ ಐದು ಸ್ಥಾನದಲ್ಲಿ ತಮ್ಮ ಪಿತೃಗಳನುದ್ಧರಿಸೆ ।
ಅಲ್ಲಿಂದ ಮರುದಿವಸ ಮತ್ತ ಮಾತಂಗ ಧರ್ಮಕೂಪ
ಅಶ್ವತ್ಥ ।
ತತ್ತಿತಳಿಸುವ ಬ್ರಹ್ಮಕುಂಡಕಕಾಶ್ಯಾನ ।
ಪ್ರತ್ಯೇಕವಾಗಿ ಪಿಂಡ ಪ್ರದಾನಗೈದು ।
ಪಿತೃಮಾತೃವಂಶ ಗತಿಗೆ ಪೊಂದಿಸುವರು ।
ಗತ್ಯಸಂಕಲ್ಪ ವಿಜಯವಿಠಲರೇಯ ।
ಆತ್ಮಸಮ್ಮತ ಪಾಲಿಸುತಿಪ್ಪ ಪ್ರತಿದಿನ ॥

### ತ್ರಿಪುಟತಾಳ

ಇನಿತು ಮಾಡಿದ ಮೇಲೆ ಪಿಷ್ಟ ಎಳ್ಳು ಪರಮಾನ್ನ |
ಘನ ಕ್ಷೀರ ತರ್ಪಣ ದೀಪವ ವಿರಚಿಸಿ |
ಅಣೋರಣಿಯಾದ ಶ್ರೀವಿಷ್ಣುಮೂರ್ತಿಯ ಮತ್ತೆ |
ವನಜಾಸನ ರುದ್ರ ಇಂದ್ರ ಸ್ಕಂದಾರ್ಕಾಬ್ಜ |
ಅನಲೈದು ಗಣೇಶ್ವರ ಕ್ರೌಂಚ ಕಲಶೋದ್ಭವ |
ಮುನಿಕಣ್ವ ದಧೀಚಿ ಮಾತಂಗ ಕಶ್ಯಪಮುನಿ |
ಎಣಿಸಿ ಹತ್ತೊಂಬತ್ತು ಪಾದದ ಮೇಲೆ ಸ- |
ದ್ಗುಣದಿಂದ ಪೂರ್ವೋಕ್ತ ಪ್ರಕಾರ ಮಾಳ್ಪುದು |
ಗುಣಪೂರ್ಣ ವಿಜಯವಿಠಲ ಗದಾಧರಗೆ ವಂ- |
ದನೆ ಮಾಡು ಗಜರೂಪದಲ್ಲಿಗೆ ಬಂದು ನಿಂದು ||

### ಝಂಪೆತಾಳ

ಭಕುತಿಯಿಂದಲಿ ಮೂಲ ವಟದಲ್ಲಿ ಶ್ರಾದ್ಧವನು |
ಸಕಲಗೋತ್ರಗಳುದ್ಧಾರಾರ್ಥವಾ |
ಲಕುಮಿ ಕುಂಡ ಗದಾಲೋಲ ಕರ್ಣಿಕೆಯಲ್ಲಿ |
ಮುಖಸಮನಾದ ಪಿಂಡಗಳನಿಟ್ಟು |
ಭಕುತಿಯಿಂದಲಿ ಕ್ಷೇತ್ರವಾಸಿಗಳ ಪೂಜಿಸಿ |
ಸುಖಬಡಿಸಿ ವಟದಲ್ಲಿ ಪಿಂಡವಗೈದು |
ಕಕುಲಾತಿಸಲ್ಲಾ ನಿಮಗಿಲ್ಲಿ ಈ ನಿಧಿಯಲ್ಲಿ |
ದುಃಖದಿಂದ ಕಡೆಬಿದ್ದು ಪೋಪ ನರನು |
ಅಖಿಲ ಲೋಕೇಶ ಸಿರಿವಿಜಯವಿಠಲರೇಯ |
ಅಕಳಂಕ ಜನರೊಡನೆ ಇಡುವ ಕರುಣದಲಿ ||

### ಅಟತಾಳ

ಸೀತಾರಾಮಗಯ ಗಯಶೀರ್ಷ ಗಯಕೂಪ |
ನೀತಾಮುಂಡ ಪೃಷ್ಠಗಿರಿ ಆದಿಗಯ ಮುಂದೆ |

ಧೌತಪಾಪ ಭೀಮಗಯ ಗೋಪಾದವು ।
ವೈತರಣಿ ತೀರ್ಥ ಇನಿತು ಸ್ಥಾನದಲ್ಲಿ ।
ಕಾತರದಿಂದಲಿ ಪಿಂಡ ಪ್ರದಾನವ ।
ಮಾತಾಪಿತೃಗಳಿಗೋಸುಗ ಕೊಟ್ಟು ಕೊಂಡಾಡಿ ।
ಆತ್ಮಾರ್ಥವಾಗಿ ದಧ್ಯಾನ್ನದ ಪಿಂಡ- ।
ದಾತ ಜನಾರ್ದನ ಸ್ವಾಮಿಯ ಕೈಯ್ಯಲ್ಲಿ ।
ತಾ ತೃಪ್ತಿಯಿಂದಲಿ ತಿಲರಹಿತವಾಗಿ ।
ಪ್ರೀತಿಯಿಂದಲಿ ಕೊಟ್ಟು ಸ್ತೋತ್ರಮಾಡಿ ।
ಗಾತ್ರ ತೊಲಗಿದಾಗಲಿ ಮುದದಿಂದ ಪ್ರ - ।
ಖ್ಯಾತ ವಿಷ್ಣುಪಾದದಲ್ಲಿ ಹಾಕೆಂದು ಭ- ।
ಕುತಿಯಿಂದಲಿ ಪೇಳಿ ಸಂತೋಷವಹುದು ।
ಹೇಯ ದಾನವ-ಹರ ವಿಜಯವಿಠಲರೇಯ ।
ಭೂತಳದೊಳಗೆ ಈ ತೆರದಲ್ಲಿ ಮೆರೆವ ॥

ಆದಿತಾಳ

ಶ್ರೀಗಾಯತ್ರಿ ಸಾವಿತ್ರಿ ಸರಸ್ವತಿ ತೀರ್ಥಗಳಲ್ಲಿ ।
ಈ ಗಿರಿಗಳಲ್ಲಿ ಇಷ್ಟಾರ್ಥ ಬೇಡುವದು ।
ಯೋಗಿಜನರು ಇಲ್ಲಿ ಧ್ಯಾನ ಮಾಡುವರು ಲೇ- ।
ಸಾಗಿ ನಾನಾ ತೀರ್ಥದಲ್ಲಿ ವಾಸವಾಗಿ ।
ಭೋಗಭೂಷಣ ಬಹು ರೂಪದಲ್ಲಿ ನಿಂದು ।
ಸಾಗರತಲ್ಪನ ಧ್ಯಾನ ಮಾಡುವನು ।
ಆಗವೋಕ್ತಿಯಿಂದ ಸಿದ್ಧವಾಗಿದೆ ಕೇಳಿ ।
ನಾಗವಾಹನ ಮಿಕ್ಕ ದೇವಾದಿಗಳು ಅನು- ।
ರಾಗ ಮತಿಯಲ್ಲಿ ಹರಿಯ ಪೂಜಿಸುವರು ।
ಈ ಗಯದ ಯಾತ್ರೆ ಮಾಡೆ ನೂರೊಂದು ಕುಲದವರು ।

ಸಾಗುವರು ಸರ್ವಬಾಧೆ ಗೆದ್ದು ಹರಿಪುರಕೆ ।
ಭಾಗೀರಥಿಯ ಜನಕ ವಿಜಯವಿಠಲನಂಘ್ರಿಗೆ ।
ಬಾಗಿ ಸಮಸ್ತ ಸೌಖ್ಯಪಡುವದು ಧನ್ಯನಾಗಿ ।

ಜತೆ

ಪಿತ್ರಾದಿಕುಲದಲ್ಲಿ ಉದ್ಧಾರವಾಗುವದು ।
ಗೋತ್ರದೊಳಗೆ ಇಪ್ಪ ವಿಜಯವಿಠಲ ಬಂದು ॥

# ಉಗಾಭೋಗಗಳು

ವಿಷಯಾಶೆ ಬಿಟ್ಟು ಹೇಸಿ ಮಾರ್ಗದಿಂ ದೂರಿರಿಸು |
ವೀಸಿಕಾಸಿಯು ತೋರಿ ಬಂಟ ಬದುಕುವ ಗಡ |
ವೇಶ್ಯಾಸ್ತ್ರೀಯು ತನ್ನ ಎದೆಯ ತೋರಿ |
ಗ್ರಾಸಕೆ ಪುಟ್ಟಿಸಿಕೊಂಬಳು, ಸೂಲಗಿತ್ತಿ |
ಕೂಸು ಮಾಸವ ಪಿಡಿದು ಬದುಕುವಳೊ |
ಔಷಧವನಿತ್ತು ವೈದ್ಯ ಬದುಕುವ ಗಡ |
ಕಾಸಿಗಾಗಿ ತೊತ್ತು ಉತ್ತಮರ ವಂಚಿಸಿ |
ಲೇಸಾಗಿ ಕುಂಟಣಿತನ ಮಾಡಿ ಬದುಕುವಳು |
ದೇಶದೊಳಗೆ ಜೋಗಿ-ಕೊರವ-ಕೋತಿ |
ಆ ಸರ್ಪದಿಂದ ಬದುಕುವರು ಗಡ |
ಪಾಶದಿಂದಲಿ ಚೋರ ಬದುಕುವನೊ |
ಏಸು ವಿಧ ಪೇಳಲಿ ಪೊಟ್ಟೆಯ ಪೊರೆವ ಜನರು |
ಮೋಸಗೊಳಿಸುವರು ಒಂದೊಂದು ಬಗೆಯ |
ಕೇಶವ ನಾನು ಇವರಂತೆ ವಂಚಕನಾಗಿ |
ವೇಷವ ಧರಿಸಿ ಪೊಟ್ಟೆಯ ಪೊರೆವೆನೋ |
ವೀಸ ತೂಕವಾದರೂ ನಿನ್ನ ಪಾದದಲಿ ವಿಶ್ವಾಸ |
ತುಸು ಘಳಿಗೆಯಾದರೂ ಇಲ್ಲ ಇಲ್ಲ|
ಆಶೆ ಕವಚದಿಂದ ನಿನ್ನ ಮೊರೆ ಬಿದ್ದು ಇ- |
ನ್ನೀ ಶರೀರವ ಜೋಕೆ ಮಾಡಿಕೊಂಡು |
ದಾಸನೆಂದೆನಿಸಿದೆ ಧರಣಿಯೊಳಗೆ ತಿರುಗಿ |
ಹೇಸಿ ಮಾರ್ಗಕ್ಕೆ ಒಳಗಾಗಿಹೆನೋ |

ನಾಶರಹಿತ ನಮ್ಮ ವಿಜಯವಿಠ್ಠಲರೇಯ ।
ಈ ಸಂಸಾರ ಚಿಂತೆ ನಿನ್ನಲ್ಲಿ ಆಗದೊ ॥

* * * *

ನಿನ್ನ ಜನರ ಸಂಗ ಕೊಡು ಎನ್ನ ಅಂತರಂಗ ।
ಘನ್ನ ಸುಗುಣಾಂತರಂಗ ಮಂಗಳಾಂಗ ।
ಅನ್ಯಾಪೇಕ್ಷೆ ಒಲ್ಲೆ ಅಂದಿನ ಬವಣೆ ಒಲ್ಲೆ ।
ಮನ್ನಿಸು ಮಾರಮಣ ಇಲ್ಲೆ ಅಲ್ಲೆ ।
ಇನ್ನು ಈ ದೇಹವನು ಕಡೆಮಾಡು ಇಹದಲ್ಲಿ ।
ಮುನ್ನ ಪುಟ್ಟಬರುವ ಕರ್ಮವ ಕಳೆ ।
ಎನ್ನ ಮನೋರಥ ಸಿರಿವಿಜಯವಿಠ್ಠಲ ಹರಿ ।
ಧನ್ಯನ ಮಾಡುವದು ಪಥವ ತೋರಿ ॥

* * * *

ನಾನು ನೀನೆಂದು ಒಮ್ಮೆಗಾದರು ನರ ।
ಅನಂತ ಜನುಮದಲ್ಲಿ ನುಡಿದನಾಗೆ ।
ಶ್ವಾನಸೂಕರ ದುರ್ಯೋನಿಯಲಿ ಪುಟ್ಟಿ ।
ಮಾನವಾಧಮನಾಗಿ ಕಟ್ಟಕಡೆಗೆ ।
ನಾನಾ ಸಂಕಟಪಟ್ಟು ಹೀನ ಭೋಜನ ಮಾಡಿ ।
ತಾನಿಳಿವ ನಿತ್ಯ ನರಕದಲ್ಲಿ ।
ಅನಂತ ಜನುಮದೊಳು ಸೇವಕನೆಂದೆನೆ ॥
ತಾನೊಲಿದು ಈವ ವಿಜಯವಿಠ್ಠಲ ಗತಿ ॥

* * * *

ಎಲೊ ಎಲೊ ದುರಿತವೆ ಓಡು ಓಡು ಎನ್ನ ।
ಬಳಿಯಲ್ಲಿ ಮೊದಲಂತೆ ತಲೆಬಲಿತು ನಿಂದೆಯಾದರೆ ನಿನ್ನ ।

ಕುಲಕೆ ಕ್ಷೇಮವಿಲ್ಲ ಕೈಲಿ ಕಡ್ಡಿಯನಿಕ್ಕಿ |
ಮಲೆತವರ ಗಂಡ ಸಿರಿಕೃಷ್ಣ ಕಂಡರೆ ನಿನ್ನ |
ತಲೆಯ ಚೆಂಡಾಡುವ ಭೂತಬಲಿಯನೀವ |
ತಿಳಿದುಕೊ ನಿನ್ನೊಳು ನೀನು ಮೊದಲಂತೆ ನಾನಲ್ಲ |
ಸುಲಭ ವಿಜಯವಿಠಲ ಒಲಿದರೆ ಭಯವಿಲ್ಲ ||

*   *   *   *

ತನ್ನಂತರ್ಯಾಮಿಪ್ಪೊಳಗಿದ್ದ ಬಿಂಬನ್ನ |
ಅನಂತಾನಂತ ಅಂಶವೇ ಚಿಂತಿಸಿ |
ಭಿನ್ನಲಿವರ ತಿಳಿದು ಅವರವರ ಒಳಗಿಪ್ಪ |
ಘನ್ನಮೂರುತಿಯ ತುತಿಸಿ ಬಹು ಬಗೆಯಿಂದ |
ಪುಣ್ಯಪ್ರಾಣನೆಂದು ಸ್ಮರಿಸಿ ಆ ಅಂಶಗಳ |
ಭಿನ್ನಮಾಡದೆ ತಿಳಿದು ಬಿಂಬನೊಳಗೆ ಚನ್ನಾಗಿ ಕೂಡಿಸಿ |
ಏಕತ್ರವೇ ಮಾಡಿ ಮುನ್ನೆ ದ್ವಿವಿಧ ಕರ್ಮ
ತೋರಿಸಲಾಗಿ |
ಪುಣ್ಯವೆ ಬರುವುದು ಅದರಿಂದಲಾದರೂ ತನ್ನ |
ಸಹಿತ ಗುಣ ಯೋಚಿಸಬೇಕು ಪನ್ನಗಶಯನ |
ನಮ್ಮ ವಿಜಯವಿಠಲರೇಯನ ಸನು- |
ಮತಿಯಿಂದ ಆಲೋಚಿಸಿದ ಮನುಜಗೆ ||

*   *   *   *

ರೆಕ್ಕೆಯ ಮುರಿದ ಪಕ್ಕಿ ಬಾಯಬಿಟ್ಟಂತೆ ಗಗ- |
ನಕ್ಕೆ ಮೊಗವೆತ್ತಿ ಕೂತಿಪ್ಪೆ ||
ಅಕ್ಕರ ನಿನಗಿನ್ನು ಬಾರದೆ ಎಲೊ ಹೇ- |
ವರ್ಗಳ ಒಡೆಯನೆ ತ್ರಿಜಗದಲಿ |
ತಕ್ಕಿಸಿ ಪೋದರೇನು ಸರ್ವ ಜೀವಿಗಳೊ- |
ಳೇತಕ್ಕೆ ಎನ್ನೊಬ್ಬನ ತುಕ್ಕಿಸುವಿಯೊ |

ಬಕ್ಕದಾಸನೊ ನಾನು ವಿಜಯವಿಠ್ಠಲ ನಿನ್ನ |
ಲೆಖ್ಖಕ್ಕೆ ಮೊದಲು ಎನಿಸುವೆನೇನಯ್ಯ ||

* * * *

ವುತ್ತತಾಳ

ಸುಡುಸುಡು ಯಾಚಕನ ಜನ್ಮ ವ್ಯರ್ಥ ವ್ಯರ್ಥ |
ಕೊಡುವೆನೆಂದರೆ ಬಹುದಿವಸ ಕಾಯ್ದು ಅಡಿಬಿದ್ದು |
ಅವನ ಮನಸ್ಸು ತನ್ನಕಡೆಗೆ ಮಾಡಿಕೊಂಡು
ಯೋಚಿಸುತ |
ಗಡಿಗೆಯೊಳಗಿನ ನೊಣದಂತೆ ಸುತ್ತುತ |
ಆಶೆ ಬಿಡಲಾರದೆ ಹಿಡಿಯಲಾರದೆ ಮಿಡುಕುತ |
ಕಡು ಮೂರ್ಖನಂತೆ ನಾನಾದೆನು ಪ್ರಾಣೇಶ |
ಕಡು ಸಂಪೂರ್ಣ ವಿಜಯವಿಠ್ಠಲರೇಯಾ |
ಕೊಡುಗೈ ದಾತಸಿರಿ ಇನಿತು ಪರರಾಶೆ ||

* * * *

ವುತ್ತತಾಳ

ಪುರಂದರದಾಸರು ವೈಶ್ಯ ಮಾದಮ್ಮನ |
ವರಕುಮಾರನ ಬದುಕಿಸಿದರು ಗಡಾ |
ಗುರು ವ್ಯಾಸಮುನಿರಾಯ ಭೂಪತಿಗೆ ಬಂದ ದು- |
ಸ್ತರವಾದ ಕುಯೋಗ ಬಿಡಿಸಿದರು ಗಡಾ |
ಸಿರಿನಾರಾಯಣ ಯೋಗಿ ವ್ಯಾಸಮುನಿಗೆ ಬಂದ |
ಉರಗಬಾಧೆಯು ಕಳೆದು ಪಾಲಿಸಿದರು ಗಡಾ |
ಹರಿಯೆ ಈ ಕಲಿಯೊಳು ನಿನ್ನ ಶರಣರು |
ಇಂಥ ಚರಿತೆ ಮಾಡಿಪ್ಪರು ಆವನಾದರು ಇನಿತು |
ಸ್ಮರಣೆಗೈದವನ ಮನಸು ನಿರ್ಮಲ ಕಾಣೊ |

ಧರೆಯೊಳಗೆ ಈ ಮನುಜ ನುಡಿದುದೆ ವೇದೋಕ್ತ |
ನೆರೆ ನಂಬಿದವರಿಗೆ ರೋಗ ಹಿಂಗಳಿದು |
ಪರಮಶುದ್ಧನ ಮಾಡಿ ಪೊರೆವನು ತಡೆಯದೆ |
ಹರಿಯ ಶರಣರಿಗೆ ಎದುರುಂಟೆ |
ಕರುಣಾಕರ ನಮ್ಮ ವಿಜಯವಿಠ್ಠಲ ನಿನ್ನ |
ಚರಣ ಧೇನಿಪರ ಪಡಿಕೊತ್ತು ನಾನಯ್ಯ ||

* * * *

ಆದಿತಾಳ

ಉಪವಾಸವಿದ್ದವನಿಗೆ ಊರು ತುಂಬಿದರೇನು |
ಅಪಹಾಸಗೊಳಿಸುವ ಗೆಳೆಯನಾದರೆ ಏನು |
ಕುಪಿತವ ಬಿಡದವನು ಕುಲಜನಾದರೇನು |
ಕಪಟವ ಬಿಡದವನ ಕೂಡ ಉಂಡರೇನು |
ಕೃಪೆ ಮಾಡದವನ ಕಾಲಿಗೆ ಬಿದ್ದರೇನು |
ತಪಸಿಗಳೊಡೆಯ ನಮ್ಮ ವಿಜಯವಿಠಲರೇಯಾ ||

* * * *

ಆದಿತಾಳ

ಒಬ್ಬ ಸತಿ-ಪತಿಗಾಗಿ ಮುನಿಯ ಶಾಪವ ಧರಿಸಿ |
ಅಬ್ಜಬಾಂಧವನ ನಿಲಿಸಿದಳು ನೋಡಾ |
ಒಬ್ಬ ಸತಿ-ಪತಿಗಾಗಿ ಧರ್ಮನ ಸಭೆಯ ಸಾರಿ |
ನಿಬ್ಬರದಿ ಪ್ರಾಣವನು ಪಡೆದಳು ನೋಡಾ |
ಒಬ್ಬ ಸತಿಪತಿಗಾಗಿ ಚಿತ್ರಗುಪ್ತರಾಡಿದ |
ಶಬ್ದ ಲಾಲಿಸಿ ಐದೆತನ ಪಡೆದಳು |
ಊರ್ವಿಯೊಳಗೀಪರಿ ಸತಿಯರ ಸ್ವಧರ್ಮ |

ನಿಬ್ಬಿಡಿಯಾಗಿದೆ ನಿನ್ನ ದಯದಿ |
ಅಬ್ಜನಾಭನೆಯಿವನ ಮೇಲೆ ದಯಮಾಡು ಕರು. |
ಣಾಬ್ಧಿಯೆ ಉಪೇಕ್ಷೆ ಮಾಡದಲೆ |
ಅಬ್ಬರದ ದೈವವೆ ಸಿರಿವಿಜಯವಿಠ್ಠಲರೇಯ|
ಲಬ್ಧವಾಗಲಿ ಬೇಡಿದವನ ಅಭಯವು ||

* * * *

ಆದಿತಾಳ

ಮಡಿ ಮಾಡಿಕೊಂಬ ಬಗೆಯ ತಿಳಿಯಬೇಕು |
ಮನುಜ ಮಡುವಿನೊಳಗಿನ ಉದಕ |
ಜಡವಲ್ಲದೆ ಮಡಿಯೆಂದೆನಿಸಿಕೊಂಬ ವಸ್ತ್ರ ತಾನೆ |
ಜಡವು ಮಡಿಯೆಂತಾಯಿತು ಪೇಳೊ ಸದಾಚಾರನೆ |
ಜಡಜಡಕೆ ಸಮ್ಮಂಧವಾದರೆ ತಕ್ಷಣಕೆ |
ಉಡುವದು ಹೊದಿವದು ಶುಚಿವಾಹದು |
ಜಡಕೆ ಈ ಸಾಮರ್ಥ್ಯ ಬಂದ ತರುವಾಯ |
ಪೊಡವೇಶ ರಂಗಂಗೆ ಪೇಳುವದಿದ್ದರೆ |
ಕಡಲಶಯನ ನಮ್ಮ ವಿಜಯವಿಠ್ಠಲರಾಯ |
ಅಡಿಗಳ ನೆನೆದವನು ಸರ್ವದಾ ಮಡಿಯೆನ್ನು ||

## ಶೋಭಾನೆ ಹಾಡು

ರಾಗ— ●ರಾಗ ( ಬಿಲಾವಲ್ ) ಆದಿತಾಳ ( ದೀಪಚಂದಿ )

ಶೋಭಾನೆ | ಶೋಭಾನವೆನ್ನಿರೆ ಸುರರಂಗನಿಯರೆಲ್ಲ
ಶೋಭಾನವೆನ್ನಿ ಶುಭವೆನ್ನಿ || ಪ |

ಮಂಗಳದೇವಿಯ ರಮಣ ಬಾ | ಶೃಂಗಾರದ ಗುಣನಿಧಿಯೆ ಬಾ |
ಅಂಗಜಜನಕ ಅರವಿಂದದಳಾಕ್ಷನೆ ರಂಗಾ ಬಾ ||
ಭವಭಯ ಭಂಗಾ ಬಾ | ಬೇವೋತ್ತುಂಗಾ ಬಾ |
ಜಗದಂತರಂಗಾ ಬಾ ಹಸೆಯಾ ಜಗುಲಿಗೆ || ೧ ||

ಸಂಕರುಷಣ ಅನಿರುದ್ಧಾ ಬಾ । ಪಂಕಜ ಸಂಭವನಯ್ಯ ಬಾ |
ಕುಂಕುಮಾಂಕಿತನೆ ಭಕುತ ಕುಮುದ ಮೃಗಾಂಕ ಬಾ ||
ನಿಷ್ಕಳಂಕಾ ಬಾ ಶಂಖಚಕ್ರಾಂಕ ಬಾ |
ಅಹಿಪರಿಯಂಕ ಬಾ ಹಸೆಯಾ ಜಗುಲಿಗೆ || ೨ ||

ಹೇಮಾಂಬರಧರ ಹರಿಯೇ ಬಾ | ಸಾಮಜರಾಜಾ ವರದಾ ಬಾ |
ಸಾಮವಿಲೋಲನೆ ಸದ್ಗುಣಶೀಲನೆ ರಾಮಾ ಬಾ ||
ಸುರಸಾರ್ವಭೌಮಾ ಬಾ ದೈತ್ಯವಿರಾಮಾ ಬಾ |
ರಣರಂಗಭೀಮಾ ಬಾ ಹಸೆಯಾ ಜಗುಲಿಗೆ || ೩ ||

ಅನಂತ ಅವತಾರ ಅಚ್ಯುತ ಬಾ | ಉನ್ನತ ಮಹಿಮನೆ
ಯಾದವ ಬಾ |
ಘನ್ನಮೂರುತಿಯೆ ಗರುಡಗಮನ ಶ್ರೀಹರಿ ||
ಮೋಹನ ಸುಪ್ರಸನ್ನಾ ಬಾ ಸಚ್ಚರಿತಾ ಬಾ |
ಭಾಗ್ಯಸಂಪನ್ನಾ ಬಾ ಜೀವರ ಭಿನ್ನಾ ಬಾ ಹಸೆಯಾ
ಜಗುಲಿಗೆ || ೪ ||

ನಾರಾಯಣ ಪರರೂಪಾ ಬಾ | [illegible] ಪ್ರತಾಪಾ ಬಾ |
ಶೌರಿ ಮುರಾರಿಯೆ ನಿಟಿಲ ಕಸ್ತೂರಿಯ ಲೇಪಾ ಬಾ ||
ಯದುಕುಲ ದೀಪಾ ಬಾ ನಿತ್ಯಸಲ್ಲಾಪಾ ಬಾ |
ನಮ್ಮ ಸಮೀಪ ಬಾ ಹಸೆಯಾ ಜಗುಲಿಗೆ || ೫ ||

ವಾಸುದೇವ ಮುಕುಂದಾ ಬಾ | ಸಾಸಿರನಾಮ ಗೋವಿಂದಾ ಬಾ |
ಕೇಶವ ಪುರುಷೋತ್ತಮ ನರಸಿಂಹ ಉಪೇಂದ್ರಾ ಬಾ ||
ಗೋಪೀಕಂದಾ ಬಾ | ಬಹುಬಲ ವೃಂದಾ ಬಾ |
ಅತಿಜವದಿಂದಾ ಬಾ ಹಸೆಯಾ ಜಗುಲಿಗೆ || ೬ ||

ಪರತತ್ತ್ವದಿ ಅತಿ ಚಿಂತಾ ಬಾ | ಪರಬೊಮ್ಮನೆ ಅತಿಶಾಂತಾ ಬಾ |
ಪರಮಾತ್ಮನೆ ಪರಿಪೂರ್ಣ ವಿಭೂತಿವಂತಾ ಬಾ ||
ಅಖಿಳ ವೇದಾಂತಾ ಬಾ | ರುಕ್ಮಿಣಿಕಾಂತಾ ಬಾ |
ಸದ್ಗುಣವಂತಾ ಬಾ ಹಸೆಯಾ ಜಗುಲಿಗೆ || ೭ ||

ಉದಯ ಪ್ರಭಾಕರ ಭಾಸಾ ಬಾ | ತ್ರಿದಶಗುಣನುತ ವಿಲಾಸಾ ಬಾ |
ಪದುಮನಾಭ ಮಾಧವ ಶ್ರೀಧರನೆ ಸುನಾಸಾ ಬಾ ||
ಸಿರಿಮಂದಹಾಸಾ ಬಾ | ಭಕುತಉಲ್ಲಾಸಾ ಬಾ |
ಶ್ರೀಶ್ರೀನಿವಾಸಾ ಬಾ ಹಸೆಯಾ ಜಗುಲಿಗೆ || ೮ ||

ಕೃಷ್ಣವೇಣಿಯ ಪಡೆದವನೆ ಬಾ | ರಥ ಹೊಡೆದವನೆ ಬಾ |
ಕೃಷ್ಣೆಯ ಕಷ್ಟವ ನಷ್ಟಮಾಡಿದ ಕೃಷ್ಣಾ ಬಾ ||
ಯದುಕುಲ ಶ್ರೇಷ್ಠ ಬಾ | ಸತತ ಸಂತುಷ್ಟ ಬಾ |
ಉಡುಪಿಯ ಕೃಷ್ಣ ಬಾ ಹಸೆಯಾ ಜಗುಲಿಗೆ || ೯ ||

ಎಲ್ಲರೊಳಗೆ ವ್ಯಾಪಕನೆ ಬಾ ಬಲ್ಲಿದ ದೊರೆಗಳ ಅರಸನೆ ಬಾ |
ನಾ ಎಲ್ಲಿ ನೋಡಲು ಪ್ರತಿಗಾಣೆ ನಿನಗೆ ಸಿರಿನಲ್ಲಾ ಬಾ ||
ಅಪ್ರತಿಮಲ್ಲ ಬಾ ಭಕ್ತವತ್ಸಲಾ ಬಾ |
ವಿಜಯವಿಠ್ಠಲ ಬಾ ಹಸೆಯಾ ಜಗುಲಿಗೆ || ೧೦

## ಉರುಟಣೆ ಹಾಡು

ರಾಗ—ಶಂಕರಾಭರಣ ತ್ರಿವಿಡಿತಾಳ

ರಾಮ ಜಾನಕೀರಮಣ ರಾಜೀವದಳನಯನ |
ಧಾಮ ನಿಧಿವಂಶ ಸೋಮನಿಗೆ || ಪ ||

ಪದುಮಸಾಲೆಯೊಳಗೆ ಪದುಮ ಗದ್ದಿಗೆ ಹಾಕಿ |
ಪದುಮನಾಭನು ಬಂದು ಕುಳಿತನು |
ಎಡದಲ್ಲಿ ಪದುಮಾಕ್ಷಿ |
ಪದುಮಸಾಧನೆ ಲಕುಮಿ ಒಪ್ಪಿದಳು || ೧ ||

ವಾಣಿ ಭಾರತಿ ಖಗಪ ರಾಣಿ ವಾರುಣಿ ಗಿರಿಜೆ |
ಮೀನಕೇತನ ರಾಣಿ ಇಂದ್ರಾಣಿ ಮಿಕ್ಕಾದವರು ||
ಆನಂದದಿ ನಕ್ಕು ನಲಿದಾಡುತಲಿ ಆಗ |
ಬಂದು ಕುಳಿತರು ತಮ್ಮ ಠಾಣೆಗೆ || ೨ ||

ಚಿನ್ನದ ತಳಿಗೇಲಿ ಎಣ್ಣೆ-ಅರಿಷಿಣ ಗಂಧ |
ಸಣ್ಣ ಕುಂಕುಮ ಜಾತಿ ಕಸ್ತೂರಿ ಪೊಂಗಳಸ ||
ಸಣ್ಣ ಕುಂಕುಮ ಜಾತಿ ಕಸ್ತೂರಿ ಪೊಂಗಳಸ |
ಹೆಣ್ಣುಗಳ ಮಧ್ಯೆ ಇಳಿಸಿದರು || ೩ ||

ತಂದೆ ತಾತನ ಬಳಿಯ ಮಂದಾಕಿನಿ ವಾಗ್ವಿಯ- |
ರೊಂದಾಗಿ ಒಡಗೂಡಿ ರಂಗಯ್ಯನ ಕೈಗೆ ||
ಒಂದಾಗಿ ಒಡಗೂಡಿ ರಂಗಯ್ಯನ ಕೈಯೊಳಗೆ |
ತಂದು ಅರಿಷಿಣ ಎಣ್ಣೆ ಗಂಧವಿತ್ತು || ೪ ||

ತಡ ಮಾಡಲಾಗದು ಕಡಲಶಯನ ನಿಮ್ಮ |
ಮಡದಿಯಂಗಕ್ಕೆ ತೊಡೆವುದೆನಲು ||

ಮಡದಿಯಂಗಕ್ಕೆ ತೊಡೆವುದು ಎನಲಾಗಿ ।
ಕಡು ಹರುಷದಿ ಸತಿಯಳ ನೋಡಿದನು ॥ ೫ ॥

ಎನ್ನರಸಿ ಹೊನ್ನರಸಿ ಪ್ರಾಣದರಸಿ ಪಟ್ಟದರಸಿ ।
ಕನ್ಯೆ ಶಿರೋಮಣಿ ಪಾವನ ದೇಹಿ ॥
ಕನ್ಯೆ ಶಿರೋಮಣಿ ಪಾವನ ದೇಹಳೆ ನಿನ್ನ ।
ಕನ್ನಡಿ ಮುಖವ ತೋರಕಿಷಿಣವ ನಾ ಹಚ್ಚುವೆ ॥ ೬ ॥

ತಂದೆ ನಂದನರಿಗೆ ಬಂಧುಬಳಗ ಸುತ್ತ ।
ಹೊಂದಿದ ಜನರಿಗೆ ಹಲವರಿಗೆ ॥
ಹೊಂದಿದ ಜನರಿಗೆ ಹಲವರಿಗೆ ಕದನ ।
ತಂದು ಹಾಕುವಳೆಂದು ಹಚ್ಚಿದನು ॥ ೭ ॥

ತೂಗಿಸಿಕೊಂಬುವಳೆ ತ್ಯಾಗಕ್ಕೆ ಸಲ್ಲುವಳೆ ।
ಬಾಗಿಲ ಕಾಯಿಸುವಳೆ ಬಲ್ಲಿದರ ॥
ಬಾಗಿಲ ಕಾಯಿಸುವಳೆ ಬಲ್ಲಿದರನು ಬಿಡದೆ ।
ಸಾಗರನ ಮಗಳು ಎಂದು ತೊಡೆದನು ॥ ೮ ॥

ಇಂದಿರಾದೇವಿ ಬಾ ಮಂದಿರಾಂಬುಜ ರಾಮ ।
ಸುಂದರ ಶ್ರೀನಾರಿ ಮಂಗಳಗಾತ್ರಿ ॥
ಸುಂದರ ಶ್ರೀನಾರಿ ಮಂಗಳಗಾತ್ರಿಯೆಂದು ।
ಅಂಗಜಜನಕನು ನಗುತಲಿದ್ದ ॥ ೯ ॥

ರಮಣಿಯ ದೇಹಕ್ಕೆ ಕಮಲನಾಭನು ಎದ್ದು ।
ವಿಮಲಕಸ್ತೂರಿ ಗಂಧವರಿಷಿಣ ಎಣ್ಣೆ ॥
ವಿಮಲಕಸ್ತೂರಿ ಗಂಧವರಿಷಿಣ ಎಣ್ಣೆಯ ।
ಕ್ರಮದಿಂದ ಲೇಪಿಸಿ ಊಟಣಿ ಸಾರಿ ॥ ೧೦ ॥

ಸಾಕಾರಗುಣವಂತಿ ತ್ರಿಲೋಕದ ಜನನಿ |
ನಾಕಜವಂದಿತಳೆ ನಾಗಗಮನೆ ||
ನಾಕಜವಂದಿತಳೆ ನಾಗಗಮನೆ ಏಳು |
ಶ್ರೀಕಾಂತನ ಸೇವೆಯ ಮಾಡೆಂದರು || ೧೧ ||

ಅಂದ ಮಾತನು ಕೇಳಿ ಗಂಧ ಅರಿಷಿಣ ಕೊಂಡು |
ಬಂದು ಸಮ್ಮುಖದಲ್ಲಿ ರಂಗನ ನೋಡಿ ||
ಬಂದು ಸಮ್ಮುಖದಲ್ಲಿ ರಂಗನ ನೋಡಿ ಹಿಗ್ಗಿ |
ಚಂದ್ರವದನೆ ಪತಿಗೆ ಹಚ್ಚಿದಳು || ೧೨ ||

ಗೋವಳರ ಎಂಜಲು ಆವಾಗ ತಿಂದವನೆ |
ಮಾವನ್ನ ಕೊಂದವನೆ ಮಾಯಾಕಾರ ||
ಮಾವನ್ನ ಕೊಂದವನೆ ಮಾಯಕಾರನೆ ನಿನ್ನ |
ಸೇವೆಗೆ ಶಕ್ತಳೆನುತ ಹಚ್ಚಿದಳು || ೧೩ ||

ಬೆಣ್ಣೆ-ಮೊಸರು ಕದ್ದು ಹೆಣ್ಣುಗಳ ಕೆಡಿಸಿ |
ಮುನ್ನೆ ತೊತ್ತಿನ ಮಗನ ಮನಿಯಲುಂಡ ||
ಮುನ್ನೆ ತೊತ್ತಿನ ಮಗನ ಮನಿಯಲುಂಡ ಹಿಂದೆ |
ಹೆಣ್ಣಾಗಿ ಇದ್ದವನೆಂದು ಹಚ್ಚಿದಳು || ೧೪ ||

ಎನ್ನರಸ ಚಿನ್ನರಸ ಪ್ರಾಣದರಸ ಪಟ್ಟದರಸ |
ಭಿನ್ನವಖಿಳ ಜೀವಕ್ಕೆನ್ನ ಒಡಿಯ ||
ಭಿನ್ನವಖಿಳ ಜೀವಕ್ಕೆನ್ನೊಡಿಯ ಸಲಹೆಂದು |
ಚೆನ್ನಾಗಿ ಅರಿಷಿಣ ಗಂಧ ಹಚ್ಚಿದಳು || ೧೫ ||

ನಿತ್ಯಕಲ್ಯಾಣ ಪುರುಷೋತ್ತಮ ಸರ್ವೇಶ |
ಸತ್ಯಸಂಕಲ್ಪ ಸಿದ್ಧ ಅಪ್ರಮೇಯಾ ||

ಸತ್ಯಸಂಕಲ್ಪ ಸಿದ್ಧ ಅಪ್ರಮೇಯನೆಂದು |
ಮಿತ್ರಿ ಸರ್ವಾಂಗಕ್ಕೆ ಹಚ್ಚಿದಳು || ೧೬ ||

ದೇವಿ ದೇವೇಶಗೆ ಈ ಉರುಟಣಿಯಲ್ಲ |
ಆವಾವ ಬಗೆ ಎಲ್ಲ ತೋರಿಸುತ್ತ ||
ಆವಾವ ಬಗೆ ಎಲ್ಲ ತೋರಿ ವಧು-ವರಗಳಿಗೆ |
ಹೂವು ಬಾಸಿಂಗವ ರಚಿಸಿದರು || ೧೭ ||

ಅಸುರರ ವಿರೋಧಿ ವಸುದೇವನಂದನ |
ಪಶುಪತಿರಕ್ಷಕ ಪರಮಪುರುಷ ||
ಪಶುಪತಿ ರಕ್ಷಕ ಪರಮಪುರುಷ ಎಂದು |
ಹಸನಾಗಿ ಲೇಪಿಸಿ ಇತ್ತ ಜನರ || ೧೮ ||

ಶೃಂಗಾರವಂತೇರು ರಂಗ ಶ್ರೀಲಕುಮಿಗೆ |
ಮಂಗಳಾರುತಿ ಎತ್ತಿ ಹರಸಿದರು ||
ಮಂಗಳಾರುತಿ ಎತ್ತಿ ಹರಸಿ ದೇವರವು ನೆಗೆ |
ಅಂಗನೆಯಳ ಸಹಿತ ನಡೆಯೆಂದರಾಗ || ೧೯ ||

ಎತ್ತಿಕೊಂಡನು ರಂಗ ಚಿತ್ತದ ವಲ್ಲಭೆಯ |
ಮತ್ತೆ ಸುಗಂಧಿಯರು ಹೊಸ್ತಿಲೊಳಗೆ ||
ಮತ್ತೆ ಸುಗಂಧಿಯರು ಹೊಸ್ತಿಲೊಳಗೆ ನಿಂದು |
ಪತ್ನಿಯ ಹೆಸರು ಪೇಳೆಂದರು ಆಗ || ೨೦ ||

ಬೇಗ ಮಾರ್ಗವ ಸಾರಿ ತೂಗಲಾರೆನು ಇವಳ |
ಸಾಗಿ ಪೋಗುವೆನೆಂದು ಪೇಳುತಿರಲು |
ಸಾಗಿ ಪೋಗುವೆನೆಂದು ಪೇಳುತಿರಲು ಸ್ತ್ರೀಕೂಟ |
ತೂಗುವದೆಂತು ನಾಳೆ ನಡಿಯೆಂದರು || ೨೧ ||

ನಕ್ಕು ಸಂತೋಷದಲಿ ರುಕ್ಮಿಣಿ ಎಂದನು |
ಅಕ್ಕಯ್ಯ ಪೇಳೆಂದು ಹೆಮ್ಮಕ್ಕಳೆಲ್ಲ
ಅಕ್ಕಯ್ಯ ಪೇಳೆಂದು ಹೆಮ್ಮಕ್ಕಳೆಲ್ಲ ಎನಲು |
ಚಕ್ರಪಾಣಿ ಎಂದು ಪೇಳಿದಳು ಲಕುಮಿ || ೨೨ ||

ಗಂಡ-ಹೆಂಡತಿ ಪೋಗಿ ದಂಡಪ್ರಣಾಮ ಮಾಡಿ |
ಮಂಡಲದ ಚರಿತೆ ತೋರಿದರು ಆಗ ||
ಮಂಡಲದ ಚರಿತೆ ತೋರಿ ವಧು-ವರಗಳಿಗೆ |
ಕಂಡವರಿಗೆ ಮದುವೆಯೆನಿಸಿದರು || ೨೩ ||

ದಂಪತ್ತುಗಳು ಒಲಿದು ಇಂಪಾಗಿ ಉರುಟಣೆ |
ಸೊಂಪಾಗಿ ಮಾಡಿದರು ಅನೇಕವಾಗಿ ||
ಸೊಂಪಾಗಿ ಮಾಡಿದವರ ಕತೆಗಳ ಕೇಳಲು |
ಸಂಪತ್ತು ಕೊಡುವನು ವಿಜಯವಿಠಲರಾಯಾ || ೨೪ ||

## ಈ ಸೊಬಗು ಇನ್ನಾವ ಕ್ಷೇತ್ರದಲಿ ಕಾಣೆ

### ಶ್ರೀ ಕ್ಷೇತ್ರ ಉಡುಪಿಯ ವರ್ಣನೆ

ರಾಗ—ಕಲ್ಯಾಣಿ ( ಯಮುನ ) ಝಂಪೆತಾಳ ( ಝಪ್ )

ಈ ಸೊಬಗು ಇನ್ನಾವ ಕ್ಷೇತ್ರದಲಿ ಕಾಣೆ ನಾ ಇಲ್ಲಿ |
ವಾಸುದೇವ ಮುನಿಯಿದ್ದ ಕಾರಣ || ಪ ||

ರಾಜಧಾನಿಯ ನೋಡೆ ಇಂದ್ರಭವನಕೆ ಮೇಲು |
ತೇಜದಲಿ ನೋಡೆ ಸೂರ್ಯನದೆ ಸೋಲು ||
ಪೂಜೆಯಲಿ ನೋಡೆ ಸರ್ವ ಧರಣಿಗೆ ಮೇಲು |
ಭೋಜನದಲಿ ನೋಡೆ ಅಮೃತಕೆ ಮೇಲು || ೧ ||

ಉತ್ಸಾಹದಲಿ ನೋಡೆ ನಹಿ ಪ್ರತಿ ನಹಿ ಪ್ರತಿ |
ಸತ್ಸಂಗತಿಯ ನೋಡೆ ಬುಧ ಸಂಗತಿ ||
ಸುಚರಿತೆಯ ನೋಡೆ ಶುದ್ಧ ಸತ್ವದ ನೀತಿ |
ಮತ್ಸರ ಮರೆದು ನೋಡೆ ಇಲ್ಲೆ ಮುಕುತಿ || ೨ ||

ಓಲಗದಲಿ ನೋಡೆ ಸತ್ಯಲೋಕಕೆ ಸಮ |
ಕೇಳುವ ಕೀರ್ತನೆ ನೋಡು ವೇದಸ್ತೋಮ ||
ಬಾಲ ಉಡುಪಿಯ ಕೃಷ್ಣ ವಿಜಯವಿಠ್ಠಲರೇಯನ |
ತಿಳಿದ ಮಾನವಗೆ ಫಲವು ನಿಷ್ಕಾಮಾ || ೩ ||

## ಜಯಮಂಗಳಂ ನಿತ್ಯ ಶುಭಮಂಗಳಂ

### ಆರತಿ ಪದ

ರಾಗ—ಭೈರವಿ ( ಭೈರವಿ ) ಅಟತಾಳ ( ಝಪ್ )

ಜಯಮಂಗಳಂ ನಿತ್ಯ ಶುಭಮಂಗಳಂ || ಪ ||

ಮಂಗಳಂ ಹತ್ತಾವತಾರದ ದೇವಗೆ |
ಮಂಗಳಂ ಹತ್ತುದಿಕ್ಕಿನ ಒಡೆಯಗೆ ||
ಮಂಗಳಂ ಹತ್ತಾವತರಣದಲಿ ವ್ಯಾಪ್ತನಿಗೆ |
ಮಂಗಳಂ ಹತ್ತರದಲಿಪ್ಪ ಹರಿಗೆ || ಅ. ಪ. ||

ನೋಡುವಗೆ ಗಿರಿಯ ಕೆಳಗಾಡುವಗೆ ಭೂಮಿಯನು |
ತೋಡುವಗೆ ಮಹಭಯವ ಮಾಡುವಗೆ ||
ಬೇಡುವಗೆ ವೈರಿಗಳ ಕಾಡುವಗೆ ಅಮೃತಾನ್ನ |
ನೀಡುವಗೆ ಗೋಪಿಯರ ಕೂಡುವಗೆ || ೧ ||

ಬೆಳೆವವಗೆ ಖಡ್ಗವನು ಕೊಳೆವವಗೆ ಜಲದೊಳಗೆ |
ಮೊಳೆವವಗೆ ಪಾತಾಳಕಿಳಿವವಗೆ |
ಮುಳುಗುವಗೆ ನಖವನ್ನು ಕೊಳೆವವಗೆ ಕ್ಷಿತಿಪನ್ನ |
ಕುಳಿವವಗೆ ಕ್ಷತ್ರ ಕುಲವಳಿವವಗೆ ‖ ೨

ಚರಿಸುವಗೆ ಪರ್ವತವ ಧರಿಸುವಗೆ ವ್ರತವ ಅಪ- |
ಹರಿಸುವಗೆ ತುರಗವನು ಹಾರಿಸುವಗೆ ‖
ಅರಸುವಗೆ ಸುರರನುದ್ಧರಿಸುವಗೆ ಧರೆಯ ಪತಿ- |
ಕರಿಸುವಗೆ ದಯಾದೃಷ್ಟಿ ಸುರಿಸುವವಗೆ ‖ ೩

ಪಡೆದವಗೆ ಮಾತೆಯನು ಕಡಿದವಗೆ ಕೋದಂಡ |
ಹಿಡಿದವಗೆ ರಥವನ್ನು ಹೂಡಿದವಗೆ ‖
ಬಿಡುವವಗೆ ಕಲಿತಾಪ ಸುಡುವವಗೆ ಪದವಿಲ್ಲದೆ |
ನಡೆವವಗೆ ಅಮೃತವನು ಕೊಡುವವಗೆ ‖ ೪

ಕಾಹನಿಗೆ ಕಂಭದಿಂ ಬಾಹನಿಗೆ ಊರ್ಧ್ವಗ- |
ನಾಹನಿಗೆ ಕ್ಷತ್ರಿಯರ ದ್ರೋಹನಿಗೆ ‖
ಹೋಹನಿಗೆ ಎರಡರಲಿ ಮೋಹನಿಗೆ ಸುಜನರ |
ಸ್ನೇಹನಿಗೆ ಶ್ರೀವಿಜಯವಿಠ್ಠಲ ಹರಿಗೆ ‖ ೫

++++++++

# ಟಿಪ್ಪಣಿ

**ಅಜಮಿಳ** : ಕನ್ಯಾಕುಬ್ಜದ ಒಬ್ಬ ಬ್ರಾಹ್ಮಣ. ತಂದೆ-ತಾಯಿ–ಹೆಂಡತಿ ಎಲ್ಲರನ್ನೂ ಬಿಟ್ಟು ಸೂಳೆಯೊಬ್ಬಳ ಮನೆಯಲ್ಲಿ ದುರಾಚಾರದ ಜೀವನ ನಡೆಸಿದ. ಇವನ ಹತ್ತು ಜನ ಮಕ್ಕಳಲ್ಲಿ ಕೊನೆಯವನ ಹೆಸರು 'ನಾರಾಯಣ'. ಮರಣ ಕಾಲದಲ್ಲಿ ಅಜಾಮಿಳ ತನ್ನ ಈ ಕೊನೆಯ ಮಗನ ಹೆಸರನ್ನು ಜೋರಾಗಿ ನೆನೆದ. ಈ ನಾರಾಯಣ ನಾಮಸ್ಮರಣೆ ಮಾತ್ರದಿಂದ ಅಜಾಮಿಳನಿಗೆ ಮುಕ್ತಿ ದೊರೆಯಿತು.

**ಇಳೆಗೆ ಭಾರವು ತೂಕವಾಯಿತು** : ಕೃಷ್ಣಾವತಾರದ ಹೊತ್ತಿಗೆ ದುಷ್ಟ ರಾಜರಿಂದಾಗಿ ಭೂಮಿಯು ಭಾರವಾಗಿದ್ದು ಅದನ್ನಿಳಿಸಲು ಭಗವಂತ ಕೃಷ್ಣಾವತಾರ ತಾಳಿದ.

**ಈರೈದು ತಲೆಯುವನು** : ಹತ್ತು ತಲೆಯವನು, ರಾವಣ. ರಾಮಾವತಾರದ ಉಲ್ಲೇಖ.

**ಈರೈದು ಇಂದ್ರಿಯಂಗಳು** : ಪಂಚಕರ್ಮೇಂದ್ರಿಯಗಳು ಮತ್ತು ಪಂಚ ಜ್ಞಾನೇಂದ್ರಿಯಗಳೆಂಬ ಹತ್ತು ಇಂದ್ರಿಯಗಳು.

**ಉತ್ಪತ್ತಿ, ಸ್ಥಿತಿ, ಲಯ** : ಹುಟ್ಟು, ಪಾಲನೆ, ಮತ್ತು ನಾಶ (ಇವುಗಳಿಗೆ ಕ್ರಮವಾಗಿ ಬ್ರಹ್ಮ, ವಿಷ್ಣು, ಮಹೇಶ್ವರರು ಕಾರಣಕರ್ತರು.)

**ಏಕಾದಶ ರುದ್ರರು** : ಅಜೈಕಪಾದ, ಅಹಿರ್ಬುಧ್ನ್ಯ, ಪಿನಾಕಿ, ಋತ, ಪಿತೃರೂಪ, ತ್ರ್ಯಂಬಕ, ಮಹೇಶ್ವರ, ವೃಷಾಕಪಿ, ಶಂಭು, ಹವನ, ಈಶ್ವರ—ಎಂಬ ಹನ್ನೊಂದು ಜನ ರುದ್ರರು. (ವಿಷ್ಣುಪು.)

**ಕಂಸಾಸುರ ಮರ್ದನ** : ತನ್ನ ಸೋದರಮಾವನೂ ರಾಕ್ಷಸ ರಾಜನೂ ಆದ ಕಂಸನನ್ನು ಕೊಂದ ಶ್ರೀಕೃಷ್ಣ.

**ಕಪಿಲತೀರ್ಥ** : ತಿರುಪತಿಯಲ್ಲಿರುವ ತೀರ್ಥ. ಇಲ್ಲಿ ಕಪಿಲಮುನಿಗಳು ತಪಸ್ಸು ಮಾಡಿದ್ದರಿಂದ ಈ ಹೆಸರು ಬಂದಿತು.

**ಕರಿರಾಜನ ಮೊರೆ ಕೇಳಿ :** ಆನೆಯು ಸರೋವರದಲ್ಲಿ ಮೊಸಳೆಯೊಂದರಿಂದ ಹಿಡಿಯಲ್ಪಟ್ಟು ಆರ್ತವಾಗಿ ಕೂಗಿದಾಗ ನಾರಾಯಣ ಬಂದು ಅದರ ಬಂಧನ ಬಿಡಿಸಿದ. ( ಗಜೇಂದ್ರಮೋಕ್ಷ )

**ಕಲಿಪುರುಷ ಸುಜನರ ಮೇರೆದಪ್ಪಿಸಿ :** ಕಲ್ಕಿ ಅವತಾರ.

**ಕಾಮಧೇನು :** ಬೇಡಿದುದನ್ನು ಕೊಡುವ ದೇವಲೋಕದ ಆಕಳು.

**ಕೌಶಿಕಯಜ್ಞ :** ರಾಮಾವತಾರದಲ್ಲಿ ವಿಶ್ವಾಮಿತ್ರನು ಮಾಡುವ ಯಾಗಕ್ಕೆ ರಾಕ್ಷಸರ ಉಪಟಳ ಆಗಬಾರದೆಂದು ರಾಮ-ಲಕ್ಷ್ಮಣರು ಧನುರ್ಧಾರಿಗಳಾಗಿ ಯಾಗರಕ್ಷಣೆಯನ್ನು ಮಾಡಿದರು.

**ಗಯಾ ಶ್ರಾದ್ಧ :** ಗಯಾಕ್ಷೇತ್ರದಲ್ಲಿ ಪಿಂಡಪ್ರದಾನ ಮಾಡಿ ಶ್ರಾದ್ಧ ಮಾಡಿದರೆ ಪಿತೃಗಳಿಗೆ ಮೋಕ್ಷ ಉಂಟೆಂಬ ನಂಬಿಕೆಯಿದೆ.

**ತಮೋಗುಣ :** ಕ್ರೋಧ, ಮೋಹ, ಅಜ್ಞಾನ ಪ್ರಮಾದ ಮೊದಲಾದ ಲಕ್ಷಣಗಳುಳ್ಳ ಗುಣ.

**ತರುಮಣಿ :** ಬೇಡಿದುದನ್ನೀಯುವ ಕಲ್ಪವೃಕ್ಷ ಮತ್ತು ಚಿಂತಾಮಣಿ.

**ತಾಪತ್ರಯ :** ಆಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕ—ಎಂಬ ಮೂರು ಬಗೆಯಾದ ತಾಪಗಳು.

**ತ್ರಯಲೋಕ :** ಪಾತಾಳ, ಭೂಮಿ, ಸ್ವರ್ಗ ಎಂಬ ಮೂರು ಲೋಕಗಳು.

**ತ್ರಿಪುರಸಂಹಾರ :** ತಾರಕಾಸುರನಿಗೆ ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಎಂದು ಮೂರು ಜನ ಮಕ್ಕಳಿದ್ದರು. ಅವರು ತಪಸ್ಸಿನಿಂದ ಬ್ರಹ್ಮನನ್ನು ಮೆಚ್ಚಿಸಿ ದೇವತೆಗಳಿಂದಲೂ ಭೇದಿಸಲು ಅಸಾಧ್ಯವಾದ ಮೂರು ಪಟ್ಟಣಗಳನ್ನು ನಿರ್ಮಿಸಿಕೊಂಡು ಉನ್ಮತ್ತರಾಗಿ ದೇವತೆಗಳಿಗೆ ಉಪಟಳ ಕೊಡತೊಡಗಿದರು. ಇವರ ಉಪಟಳ ತಾಳದೇ ದೇವತೆಗಳೆಲ್ಲ ಶಿವನ ಮೊರೆ ಹೊಕ್ಕರು. ಆಗ ಶಿವ ಭೂಮಿಯನ್ನು ರಥ ಮಾಡಿ, ವೇದಗಳನ್ನು ಕುದುರೆ ಮಾಡಿ, ಬ್ರಹ್ಮನನ್ನು ಸಾರಥಿ ಮಾಡಿ, ಮಂದರ ಪರ್ವತವನ್ನು ಬಿಲ್ಲನ್ನಾಗಿಯೂ, ಸಮುದ್ರವನ್ನು ಬತ್ತಳಿಕೆಯನ್ನಾಗಿಯೂ ಮಾಡಿ, ಆದಿಶೇಷನನ್ನೇ ಹೆದೆ ಮಾಡಿ

ವಿಷ್ಣುವನ್ನು ಬಾಣವಾಗಿ ಪ್ರಯೋಗಿಸಿ ಪುಷ್ಯನಕ್ಷತ್ರದಲ್ಲಿ ಮೂರೂ ಪುರಗಳನ್ನು ಸುಟ್ಟು ಹಾಳುಮಾಡಿಬಿಟ್ಟನು.

**ತ್ವಕ್ಚಕ್ಷು ಇಂದ್ರಿಯಗಳು :** ಚರ್ಮ, ಕಿವಿ, ಕಣ್ಣು, ನಾಲಿಗೆ ಮತ್ತು ಮೂಗು ಎಂಬ ಪಂಚಜ್ಞಾನೇಂದ್ರಿಯಗಳು.

**ದಕ್ಷ ಪ್ರಜೇಶ್ವರನಧ್ವರ ಶಿಕ್ಷಣೆ ಮಾಡಿದ :** ದಕ್ಷನು ತನ್ನ ಪುತ್ರಿಯರಲ್ಲಿ ಒಬ್ಬಳಾದ ಸತಿಯನ್ನು ಶಿವನಿಗೆ ಮದುವೆ ಮಾಡಿಕೊಟ್ಟಿದ್ದ. ಒಮ್ಮೆ ದೇವಸಭೆಯಲ್ಲಿ ಅಳಿಯ ತನಗೆ ಮರ್ಯಾದೆ ಮಾಡಲಿಲ್ಲ ಎಂದು ಸಿಟ್ಟಿಗೆದ್ದು ತಾನು ಮಾಡುವ ನಿರೀಶ್ವರ ಯಾಗಕ್ಕೆ ಶಿವ-ಸತಿಯರಿಗೆ ಆಮಂತ್ರಣವನ್ನೇ ಕೊಡಲಿಲ್ಲ. ಆದರೂ ಸತಿಯು ಯಜ್ಞಕ್ಕೆ ಹೋಗಿ ಅಲ್ಲಿ ಅವಮಾನ, ತಿರಸ್ಕಾರಗಳಿಗೆ ಈಡಾಗಿ ಯಜ್ಞಕುಂಡದಲ್ಲಿ ಹಾರಿ ಪ್ರಾಣತ್ಯಾಗಮಾಡಿದಳು. ಶಿವ ಈ ಸಮಾಚಾರ ಕೇಳಿ ವೀರಭದ್ರ-ನನ್ನು ಕಳಿಸಿ ದಕ್ಷನ ಯಜ್ಞವನ್ನು ಧ್ವಂಸ ಮಾಡಿಸಿಬಿಟ್ಟ

**ಧಾತುಗಳು :** ಮಾಂಸ, ಮಜ್ಜಾ, ರಕ್ತ, ಕಫ, ಸ್ವೇದ, ರೇತಸ್ಸು, ಪಿತ್ತ—ಎಂಬ ಏಳು ಧಾತುಗಳು.

**ಧುರದೊಳಕ್ಷನ :** ಅಕ್ಷಕುಮಾರನು ಮಂಡೋದರಿ–ರಾವಣರ ಕಿರಿಯ ಮಗನು. ಹನುಮಂತನು ಸೀತಾಶೋಧಕ್ಕಾಗಿ ಲಂಕೆಗೆ ಹೋದಾಗ ಇವನನ್ನು ಸಂಹರಿಸಿದನು.

**ದ್ವಾರಾವತಿಯೆತ್ತ....ಮಾರಾಟದ ಹಡಗು ಪೋಗಿಬರುವದೆತ್ತ :**

ಮಧ್ವಾಚಾರ್ಯರು ಮಾಡಿದ ಉಡುಪಿಯ ಶ್ರೀಕೃಷ್ಣಮೂರ್ತಿಯ ಪ್ರತಿಷ್ಠಾಪನೆಯ ಹಿನ್ನೆಲೆಯಾಗಿ ಒಂದು ಕಥೆ ಇದೆ :

ಮಧ್ವಾಚಾರ್ಯರು ಸಮುದ್ರದ ದಡದಲ್ಲಿ ಕುಳಿತಾಗ ಪಡುವಣ ದಿಕ್ಕಿನಿಂದ ಒಂದು ಹಡಗು ಬರುತ್ತಿರುವುದು ಕಾಣುತ್ತದೆ. ಆಗ ಅಕಸ್ಮಾತ್ತಾಗಿ ಬೀಸಿದ ಬಿರುಗಾಳಿಯಿಂದಾಗಿ ಹಡಗು ಅಲ್ಲೋಲ-ಕಲ್ಲೋಲವಾಗತೊಡಗುತ್ತದೆ. ಆಗ ಮಧ್ವಾಚಾರ್ಯರು ತಮ್ಮ ತಪಃಶಕ್ತಿಯಿಂದ ಆ ಹಡಗು ಸುರಕ್ಷಿತವಾಗಿ ದಡ ಸೇರುವಂತೆ ಮಾಡುತ್ತಾರೆ. ಆಗ ಆ ಹಡಗಿನ ಯಜಮಾನನು ಭಕ್ತಿಯಿಂದ

ಏನಾದರೂ ಕೊಡಬೇಕೆಂದು ಇಚ್ಛಿಸಿದಾಗ ಮಧ್ವಾಚಾರ್ಯರು ಅವನ ಹಡಗಿನಲ್ಲಿರುವ ಚಂದನದ ಗುಡ್ಡೆಯನ್ನು ಕೊಡಲು ತಿಳಿಸುತ್ತಾರೆ. ಶ್ರೀಕೃಷ್ಣನ ಬಾಲಗೋಪಾಲ ಸ್ವರೂಪದ ದಿವ್ಯ ಮೂರ್ತಿಯು ಆ ಗುಡ್ಡೆಯಲ್ಲಿ ಹುದುಗಿಕೊಂಡಿರುವುದು ಅವರ ಅಂತರ್ದೃಷ್ಟಿಗೆ ಗೋಚರವಾಗುತ್ತದೆ. ಆಗ ಅದನ್ನೇ ಉಡುಪಿಯಲ್ಲಿ ತಂದು ಪ್ರತಿಷ್ಠಾಪನೆಯನ್ನು ಮಾಡುತ್ತಾರೆ.

**ಪಂಚಭೂತಗಳು :** ಪೃಥ್ವಿ, ಜಲ, ವಾಯು, ತೇಜ, ಆಕಾಶ ಎಂಬ ಐದು ಭೂತಗಳು.

**ಪಾಂಚಜನ್ಯ :** ಶ್ರೀಕೃಷ್ಣನ ಕೈಯಲ್ಲಿರುವ ಒಂದು ಶಂಖ.

**ಬಕ :** ಭೀಮನಿಂದ ಸಂಹಾರ ಹೊಂದಿದ ಬಕಾಸುರ ಎಂಬ ರಾಕ್ಷಸ.

**ಬಲಿಯ ಅಟ್ಟುಳಿ ಹೆಚ್ಚಿತು :** ಬಲಿ ಚಕ್ರವರ್ತಿಯನ್ನು ಮೆಟ್ಟಿದ ವಾಮನಾವತಾರದ ಉಲ್ಲೇಖ.

**ಮೂರು ಪುರದವರೀಗ ನವ್ಯಸು :** ತ್ರಿಪುರಾಸುರರ ಸಂಹಾರಕ್ಕಾಗಿ ಬೌದ್ಧಾವತಾರ.

**ಮೇದಿನಿಯ ಬಳಕೊಂಡು ಕೊರಟನು :** ವರಾಹ ಅವತಾರದ ಪ್ರಸಂಗ.

**ರಜೋವೊದಲಾದ :** ಸಾತ್ವಿಕ, ರಾಜಸ, ಮತ್ತು ತಾಮಸ ಎಂಬ ಮೂರು ಬಗೆಯ ಗುಣಗಳಲ್ಲಿ ರಜೋಗುಣ ಕಾಮ, ರಾಗ, ಮದ, ಆಲಸ್ಯಾದಿಗಳಿಂದ ಕೂಡಿದುದು, ತಾಮಸಗುಣ ಕ್ರೋಧ, ಮೋಹ, ಅಜ್ಞಾನ ಪ್ರಮಾದಾದಿ ಲಕ್ಷಣಗಳಿಂದ ಕೂಡಿದುದು.

**ರಿಪುಗಜಸಿಂಗ :** ವೈರಿಗಳೆಂಬ ಆನೆಗೆ ಸಿಂಹದಂತಿರುವವ.

**ವರಮುನಿ ಪಸವನು :** ಪಾಂಡವರಿಗೆ ಅಕ್ಷಯಪಾತ್ರೆ ದೊರಕಿದ ಸುದ್ದಿ ಕೇಳಿ ದುರ್ಯೋಧನ ದೂರ್ವಾಸರನ್ನು ಪಾಂಡವರ ಪರೀಕ್ಷೆಗಾಗಿ ಕಳಿಸಿದುದು.

**ವಾರಿಧಿಸುತೆ :** ಲಕ್ಷ್ಮಿ, ಸಮುದ್ರಮಥನ ನಡೆದಾಗ ಹುಟ್ಟಿದ ಹದಿನಾಲ್ಕು ಅಮೂಲ್ಯ ವಸ್ತುಗಳಲ್ಲಿ ಇವಳೂ ಒಬ್ಬಳು.

**ವಾರುಧಿಯ ಪೊಕ್ಕವ :** ಮತ್ಸ್ಯಾವತಾರದ ವಿಷ್ಣು.

**ವಿದ್ಯಾರಣ್ಯನ ಗರುವಿಕೆ ಪರಿಹಾರ :** ಟೀಕಾಚಾರ್ಯರಿಗೂ ವಿದ್ಯಾರಣ್ಯ ರಿಗೂ ವಾದನಡೆದು ಅದರಲ್ಲಿ ವಿದ್ಯಾರಣ್ಯರು ಸೋತರೆಂದು ಒಂದು ದಂತಕಥೆ ಪ್ರಚಲಿತದಲ್ಲಿದೆ.

**ವೆಗ್ಗಳಿಸಿದರು ಛತ್ರಿಯರು :** ಅರಸರ ಸದ್ದಡಗಿಸಿದ ಪರುಶುರಾಮಾವ-ತಾರ.

**ವೇದವನು ತವು ಕದ್ದು :** ಮತ್ಸ್ಯಾವತಾರದ ಉಲ್ಲೇಖ.

**ಷಡ್ರಸ :** ಸಿಹಿ, ಉಪ್ಪು, ಕಹಿ, ಒಗರು, ಹುಳಿ, ಕಾರ ಎಂಬ ಆರು ರೀತಿಯ ರಸಗಳು, ( ರುಚಿಗಳು ).

**ಷೋಡಶೋಪಚಾರ :** ಆವಾಹನೆ, ಆಸನ, ಪಾದ್ಯ, ಅರ್ಘ್ಯ, ಆಚಮ-ನೀಯ, ಮಧುಪರ್ಕ, ಸ್ನಾನ, ಆಭರಣ, ಗಂಧ, ಪುಷ್ಪಾಕ್ಷತ, ಧೂಪ, ದೀಪ, ನೈವೇದ್ಯ, ನೀರಾಜನ, ಪ್ರದಕ್ಷಿಣ, ನಮಸ್ಕಾರ ಎಂಬ ಪೂಜಾಕಾಲದಲ್ಲಿ ಮಾಡತಕ್ಕ ಹದಿನಾರು ವಿಧದ ಉಪ-ಚಾರಗಳು.

**ಸಾಸಿರಗಣ್ಣ :** ಇಂದ್ರನಿಗೆ ಸಹಸ್ರ ಕಣ್ಣುಗಳು. ಇಂದ್ರನು ಗೌತಮರ ಪತ್ನಿ ಅಹಲ್ಯೆಯನ್ನು ಮೋಹಿಸಿ ಮೋಸದಿಂದ ಅವಳನ್ನು ಸಂಭೋಗಿಸಿದ. ಆದರೆ ಗೌತಮರ ಕೈಗೆ ಸಿಕ್ಕುಬಿದ್ದ. ಕ್ರೋಧಗೊಂಡ ಗೌತಮರು ಅವನ ನಿರ್ಲಜ್ಜತ್ವವನ್ನು ಕಂಡು ಅವನಿಗೆ ಮೈತುಂಬ ಯೋನಿಯಾಗ ಲೆಂದು ಶಾಪ ಕೊಟ್ಟರು. ಅಂದಿನಿಂದ ಇಂದ್ರ ಸಹಸ್ರಾಕ್ಷನಾದ.

**ಸಾಸಿರವದನಶಯನ :** ಸಾವಿರ ಹೆಡೆಗಳುಳ್ಳ ಆದಿಶೇಷನ ಮೇಲೆ ಮಲಗಿ ಕೊಳ್ಳುವವ, ನಾರಾಯಣ.

**ಸುರಪತಿ ಮುನಿದೇಳು :** ಗೋಕುಲದ ಜನರೆಲ್ಲ ಮಳೆಗಾಗಿ ಪ್ರತಿ ವರ್ಷವೂ ಇಂದ್ರನ ಪೂಜೆಯನ್ನು ಮಾಡುತ್ತಿದ್ದರು ಆದರೆ ಕೃಷ್ಣನು ಅದನ್ನು ನಿಲ್ಲಿಸಿದ. ಇದರಿಂದ ಸಿಟ್ಟಿಗೆದ್ದ ಇಂದ್ರ ಧಾರಾ-ಕಾರವಾಗಿ ಏಳುದಿನ ಮಳೆಗರೆದ. ಆದರೆ ಕೃಷ್ಣ ತನ್ನ ಕಿರುಬೆರಳಿ

ನಿಂದ ಗೋವರ್ಧನ ಗಿರಿಯನ್ನು ಎತ್ತಿಹಿಡಿದು ಅದರ ಬುಡದಲ್ಲಿ ಎಲ್ಲರಿಗೂ ರಕ್ಷಣೆಯನ್ನಿತ್ತ.

**ಹಂಸ-ಡಿಬಿಕ :** ಇವರು ಸಹೋದರರಾಗಿದ್ದು ಜರಾಸಂಧನ ಮಂತ್ರಿ-ಗಳಾಗಿದ್ದರು. ಇವರಿಬ್ಬರೂ ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ಶಸ್ತ್ರದಿಂದ ಹತರಾಗದಂತೆ ವರವನ್ನು ಪಡೆದಿದ್ದರು. ಇವರ ಪರಾ. ಕ್ರಮಕ್ಕೆ ಮೆಚ್ಚಿ ಜರಾಸಂಧ, ಬಲರಾಮ-ಕೃಷ್ಣರ ಜೊತೆಗೆ ಯುದ್ಧ ಮಾಡಲು ತನ್ನ ಜೊತೆಗೆ ಇವರನ್ನೂ ಕರೆದುಕೊಂಡು ಹೋದ. ಹಂಸ ಅಲ್ಲಿ ಮೂರ್ಛಿತನಾಗಿ ನೆಲಕ್ಕೆ ಬೀಳಲು ಅವನು ಸತ್ತನೆಂದು ತಿಳಿದು ಭ್ರಾಂತಿಯಿಂದ ಡಿಂಭಕ ಯಮುನೆಯಲ್ಲಿ ಬಿದ್ದು ಪ್ರಾಣ ತ್ಯಾಗ ಮಾಡಿದ. ಎಚ್ಚತ್ತ ಹಂಸನಿಗೆ ಈ ವರ್ತಮಾನ ತಿಳಿದಾಗ ಅವನೂ ಪ್ರಾಣ ತ್ಯಾಗಮಾಡಿದ.

**ಹಾಲಾಹಲ :** ದೇವತೆಗಳೂ, ದಾನವರೂ ಕೂಡಿ ಕ್ಷೀರಸಾಗರವನ್ನು ಮಥನ ಮಾಡಿದಾಗ ಅದರಲ್ಲಿ ಹದಿನಾಲ್ಕು ಅಮೂಲ್ಯ ವಸುಗಳು ಹುಟ್ಟಿದುವು. ಅವುಗಳಲ್ಲಿ ಹಾಲಾಹಲವೆಂಬ ವಿಷವೂ ಒಂದು. ಅದು ಹುಟ್ಟಿದೊಡನೇ ಜಗತ್ತನ್ನು ಸುಡಲು ಪ್ರಾರಂಭ ಮಾಡಿತು. ಆಗ ಪರಶಿವನು ಅದನ್ನು ಸೇವಿಸಿ ತನ್ನ ಕಂಠದಲ್ಲಿ ಇಟ್ಟುಕೊಂಡನು.

# ಶಬ್ದಕೋಶ

**ಅಂಕ :** ತೊಡೆ

**ಅಂಗಜಜನಕ :** ಕಾಮನ ತಂದೆ, ವಿಷ್ಣು

**ಅಂಗಜನ ಚಾಪ :** ಕಾಮನಬಿಲ್ಲು

**ಅಂಘ್ರಿ :** ಪಾದ

**ಅಂಡಲೆ :** ಕಾಡು, ಹಟಮಾಡು; ಗೊತ್ತುಗುರಿಯಿಲ್ಲದೆ ಅಲೆದಾಡು

**ಅಂಡಜವಾಹನ :** ಗರುಡವಾಹನ, ವಿಷ್ಣು

**ಅಂತಕಾಪುರ :** ಯಮಪುರ

ಅಂಬಿನ ಮೊನೆ : ಬಾಣದ ತುದಿ
ಅಂಬುಧಿ : ಸಮುದ್ರ
ಅಕ್ಕಟ : ಅಯ್ಯೋ !
ಅಗ್ರಜಳು : ಹಿರಿಯವಳು, ಅಕ್ಕ
ಅಖಿಳ : ಅಖಿಲ, ಸರ್ವ, ಪೂರ್ತಿ
ಅಘ : ಪಾಪ
ಅಜಭವ : ಬ್ರಹ್ಮ ಮತ್ತು ಶಿವ
ಅಡಿಬಿದ್ದು : ಪಾದಕ್ಕೆ ನಮಸ್ಕರಿಸಿ
ಅಣಕ : ಅಪಹಾಸ್ಯ
ಅಣು : ತೀರ ಚಿಕ್ಕಪದಾರ್ಥ
ಅಣೋರಣಿಯಾನ್ : ಚಿಕ್ಕದ-ಕ್ಕಿಂತಲೂ ಚಿಕ್ಕವನಾದ
ಅರ್ಥಿ : ಬಯಕೆ
ಅದ್ರಿ : ಬೆಟ್ಟ
ಅಧಮ : ನೀಚ
ಅಧ್ವರ : ಯಜ್ಞ
ಅಧಿಷ್ಠಾನ : ನೆಲೆ, ನೆಲೆಸಿರುವದು
ಅಧ್ಯಾತ್ಮ : ಶಾರೀರಿಕ, ಮಾನಸಿಕ ಸಂಬಂಧಿ
ಅನಲ : ಬೆಂಕಿ, ಅಗ್ನಿ
ಅನಿಮೇಷ : ಕಣ್ಣುಮಿಳುಕಿಸದ-ದೇವತೆ
ಅನುಜ:ಒಡಹುಟ್ಟಿದವ, ಸಹೋದರ
ಅಭೀಷ್ಟೆ : ಇಚ್ಛೆ
ಅಬ್ಧಿ : ಸಮುದ್ರ
ಅರವಿಂದನಯನ : ಕಮಲದಂತೆ ಸುಂದರವಾದ ಕಣ್ಣುಳ್ಳವ
ಅರ್ಚನೆ : ಪೂಜೆ
ಅವಗುಣ : ಕೆಟ್ಟಗುಣ
ಅವನಿವಳ : ಭೂಮಿಯಲ್ಲಿ, ಜಗತ್ತಿನಲ್ಲಿ
ಅಸು : ಜೀವ
ಅಸ್ಥಿ : ಅಸ್ತಿ, ಎಲವು
ಅಹಮ್ಮತಿ : ಅಹಂಕಾರ
ಅಹಿ : ಹಾವು
ಅಹಿಪರ್ಯಂಕ : ಹಾವಿನ ಹಾಸಿಗೆ, ವಿಷ್ಣುವಿನ ಹಾಸುಗೆ
ಆದಿದೈವಿಕ : ಜನನ, ಮರಣ ಸಂಬಂಧಿ
ಆದಿಭೌತಿಕ : ಭೌತಿಕಸಂಬಂಧಿ
ಆನಂದಮುನಿ : ಮಧ್ವಾಚಾರ್ಯರು
ಆಯತಾಕ್ಷಿ: ದೊಡ್ಡಕಣ್ಣುಳ್ಳವಳು
ಆಯ : ಮರ್ಮ
ಆಯು : ಆಯುಷ್ಯ
ಆಯುವೃದ್ಧಿ : ಆಯುಷ್ಯದ ಹೆಚ್ಚಳ
ಆಶಾಪಾಶ : ಆಶೆ ಎಂಬ ಬಂಧನ
ಆಹ : ಆಗುವವ
ಇಂದು : ಚಂದ್ರ
ಇತ್ತಂಡ : ಎರಡೂಪಕ್ಷ
ಇನಿತು : ಇಷ್ಟು
ಇನ : ಸೂರ್ಯ, ಅರ್ಕ
ಇನಚಂದ್ರನಿಭವಕ್ತ್ರ : ಸೂರ್ಯ-ಚಂದ್ರರಂತೆ ಪ್ರಭೆಯುಳ್ಳ ಮುಖದವನು

ಇಪ್ಪುದಕೆ : ಇರುವದಕ್ಕೆ
ಇಹೋದು : ಇರುವದು
ಇಹ : ಸಂಸಾರ
ಇಳೆ : ಭೂಮಿ
ಈಡು : ಸಾಕಷ್ಟು, ಗುರಿ
ಈಡ್ಯಾಡು : ಚೆಲ್ಲು
ಈವ : ಈಯುವ, ಕೊಡುವ
ಈಶ : ಒಡೆಯ, ದೇವ
ಉಂಬ : ಉಣ್ಣುವ
ಉಕುತಿ : ಉಕ್ತಿ, ನೀತಿಮಾತು
ಉದರ : ಹೊಟ್ಟೆ
ಉದಕ : ನೀರು
ಉದಧಿ : ಸಮುದ್ರ
ಉದಧಿಶಯನ : ಸಮುದ್ರದಲ್ಲಿ ಮಲಗಿದವ, ನಾರಾಯಣ
ಉಪರಾಗ : ಗ್ರಹಣ
ಉಪೇಕ್ಷೆ : ಅಲಕ್ಷ್ಯ
ಉಮ್ಮಳಿಕೆ : ದುಃಖ, ಸಂಕಟ
ಉಭಯ : ಎರಡೂ
ಉರಗ : ಹಾವು
ಊರ್ಬಿ : ಉರ್ವಿ, ಭೂಮಿ
ಉರು : ಬಹಳ, ಶ್ರೇಷ್ಠ
ಉರುಹಿ : ಸುಟ್ಟು
ಉರುಬೆ : ಅಬ್ಬರ
ಊರ್ಧ್ವಪುಂಡ್ರ : ಉದ್ದನಾಮ
ಎರಡೆರಡು : ನಾಲ್ಕು
ಎರಗು : ವಂದಿಸು, ನಮಸ್ಕರಿಸು
ಎಳಲ : ಏಳಲ, ತಿರಸ್ಕಾರ
ಏಕತ್ರ : ಒಂದೇಕಡೆ
ಏಕದಂತ : ಒಂದೇ ಕೋರೆ ಉಳ್ಳವ, ಗಣಪತಿ
ಏಸು : ಎಷ್ಟು
ಐದೆತನ : ಗಂಡನಿರುವ ಸೌಭಾಗ್ಯತನ, ಮುತ್ತೈದೆತನ
ಒರಲಿ : ಒದರಿ
ಓದನ : ಅನ್ನ
ಓಷಧಿ : ಔಷಧಿ, ವನಸ್ಪತಿ
ಕಂದರ್ಪ : ಕಾಮ
ಕಕುಲಾತಿ : ಕಕ್ಕುಲಾತಿ, ಕಳವಳ
ಕಕ್ಕಡ : ಪಂಜು
ಕಟಿ : ನಡು, ಸೊಂಟ
ಕದ : ಬಾಗಿಲು
ಕನಕಮುನೀಶ್ವರ : ಕನಕವೃಷ್ಟಿ ಮಾಡಿದ ಮುನೀಶ್ವರ(ವಿದ್ಯಾರಣ್ಯ)
ಕಪರ್ದಿ : ಶಿವ
ಕಮಠ : ಆಮೆ
ಕರುಣವಾರಿಧಿ : ಕರುಣಾಸಮುದ್ರ
ಕರಣ : ಇಂದ್ರಿಯ
ಕರ : ಕೈ
ಕರಿಚರ್ಮಾಂಬರ : ಆನೆಯ ಚರ್ಮದ ಬಟ್ಟೆಯುಳ್ಳ ಶಿವ
ಕಲಶೋದ್ಭವ : ಅಗಸ್ತ್ಯಋಷಿ
ಕಲ್ಪ : ಯುಗ

ಕಲ್ಪತರು : ಬೇಡಿದುದನ್ನು ನೀಡುವ ವೃಕ್ಷ, ಕಲ್ಪವೃಕ್ಷ
ಕಾಕಬಲಿ : ಕಾಗೆಗೆ ಹಾಕುವ ಹಿಡಿ ಅನ್ನ
ಕಾಕುಬುದ್ಧಿ : ದುಷ್ಟಬುದ್ಧಿ
ಕಾಣಿ : ಒಂದು ಚಿಕ್ಕ ನಾಣ್ಯ, ಆಸ್ತಿ
ಕಾದಾಂದ : ಕಾಯ್ದು ಆರಿದ
ಕಾನನ : ಅರಣ್ಯ
ಕಾಯ : ದೇಹ
ಕಾವ : ಕಾಯುವವನು
ಕಾಷ್ಠ : ಕಟ್ಟಿಗೆ, ಅರಣ್ಯ
ಕೀರುತಿ : ಕೀರ್ತಿ
ಕುಂಠಣಿತನ : ವ್ಯಭಿಚಾರಕ್ಕೆ ಗಂಡು-ಹೆಣ್ಣುಗಳನ್ನು ಜೋಡಿಸುವದು
ಕುಂತಳ : ಕೂದಲು
ಕುಚ : ಸ್ತನ, ಮೊಲೆ
ಕುಚ್ಛಿತ : ಕ್ಷುಲ್ಲಕ, ಹೀನ
ಕುಜನರು : ಕೆಟ್ಟಜನರು
ಕುತ್ಸಿತ : ಕೆಟ್ಟ
ಕುಭಾವ : ಕೆಟ್ಟಭಾವ
ಕೆಲಕೆ : ಮಗ್ಗುಲಿಗೆ, ಬದಿಗೆ
ಕೋದಂಡ : ಶ್ರೀರಾಮನ ಬಿಲ್ಲು
ಕೋವಿದರು : ಬಲ್ಲಿದರು, ಜ್ಞಾನಿಗಳು
ಕೃಷ್ಣೆ : ಕೃಷ್ಣನ ತಂಗಿ, ದ್ರೌಪದಿ
ಕೃಷ್ಣವೇಣಿ : ಕಪ್ಪಾದ ಜಡೆಯವಳು
ಕ್ಲಪ್ತ : ನಿಗದಿಯಾದ
ಕ್ರತು : ಯಜ್ಞ
ಕ್ರೌಂಚ : ನೀರುಕೊಕ್ಕರೆ ಪಕ್ಷಿ
ಖಗಪ : ಪಕ್ಷಿಗಳ ಒಡೆಯ, ಗರುಡ
ಖಳರು : ದುಷ್ಟರು
ಗಗನಾನದಿ : ಗಂಗಾನದಿ
ಗಜವರದ : ಗಜೇಂದ್ರನಿಗೆ ಮೋಕ್ಷವನ್ನು ಕರುಣಿಸಿದವ-ವಿಷ್ಣು
ಗಜಗಮನೆ : ಆನೆಯಂತೆ ಮಂದವಾದ ನಡಿಗೆ ಉಳ್ಳವಳು
ಗತಿಪ್ರದ : ಮುಕ್ತಿಯನ್ನು ಕೊಡುವಂತಹದು
ಗರಳ ಪ್ರಯೋಗ : ವಿಷ ಪ್ರಯೋಗ
ಗರುವ : ಗರ್ವ
ಗಹ್ವರ : ಗುಹೆ
ಗಾತುರ : ಗಾತ್ರ, ಶರೀರ
ಗಾವುದ : ದೂರವನ್ನು ಅಳೆಯುವ ಒಂದು ಪ್ರಮಾಣ
ಗೀರ್ವಾಣಾದ್ಯಮರರು : ಬ್ರಹ್ಮ ಮೊದಲಾದ ದೇವತೆಗಳು
ಗುಣತ್ರಯ : ಸಾತ್ವಿಕ, ರಾಜಸ, ತಾಮಸ ಗುಣಗಳು

ಗೋಪಳ್ಳಿ : ಗೋವಿನಹಳ್ಳಿ, ಗೋಕುಲ
ಗೋವಳ : ಆಕಳಕಾಯುವವ, ಗೊಲ್ಲ
ಗ್ರಾಸ : ಆಹಾರ, ತುತ್ತು
ಘಟ : ಕಲಶ, ಕೊಡ, ಬಿಂದಿಗೆ
ಘನ್ನಭಾಗ್ಯ : ದೊಡ್ಡಭಾಗ್ಯ
ಘೃತ : ತುಪ್ಪ
ಚರಣಾಬ್ಜ : ಚರಣಕಮಲ
ಚರಿಸು : ತಿರುಗು
ಚಾರು : ಸುಂದರ
ಚಿತ್ತಜ : ಕಾಮ
ಚಿತ್ರಗಾತ್ರ : ಸುಂದರ ಶರೀರ ಉಳ್ಳವ
ಚಿಲ್ಲರೆ ದೈವತ : ಕ್ಷುದ್ರದೇವತೆ
ಚೇಷ್ಟೆ : ಅಪಹಾಸ್ಯ, ಹುಡುಗಾಟ
ಚೋರ : ಕಳ್ಳ, ತುಡುಗ
ಛಲ : ಹಟ
ಜತ್ತಾಗಿ : ಜೋಡಾಗಿ, ಜೊತೆಯಾಗಿ
ಜಲಜನಾಭ : ಹೊಕ್ಕಳಲ್ಲಿ ಕಮಲ ಉಳ್ಳವ, ನಾರಾಯಣ
ಜಲಜಭವ : ಬ್ರಹ್ಮ
ಜಾರ : ಕಾಮುಕ, ವ್ಯಭಿಚಾರಿ
ಜಾಹ್ನವಿ : ಗಂಗೆ
ಜಿಹ್ವೆ : ನಾಲಿಗೆ
ಜೀಯ : ಒಡೆಯ
ಜೇನುಘೃತ : ಜೇನುತುಪ್ಪ
ಝಾವ : ಜಾವ, ಹೊತ್ತು
ಡಿಂಗರಿಗರು : ಸೇವಕರು
ಡಿಂಬ (ಭ) : ಭೌತಿಕದೇಹ
ಡೊಳ್ಳು : ಟೊಳ್ಳು, ಬೊಜ್ಜು
ತತ್ವಮಾನಿಗಳು : ತತ್ವಾಭಿಮಾನಿ ದೇವತೆಗಳು
ತನುವು : ದೇಹ
ತಮನಿಧಿ : ಕತ್ತಲೆರಾಶಿ
ತರಳ : ಬಾಲಕ
ತರಣ : ದಾಟು
ತಳಿತ : ಅರಳಿದ, ಪಲ್ಲವಿಸಿದ
ತಳೋದರಿ : ಚೆಲುವೆ, ದ್ರೌಪದಿ
ತಾಹ : ತರುವವ
ತಿರಿದು : ಬೇಡಿ
ತಿಲರಹಿತ : ಎಳ್ಳಿಲ್ಲದೆ (ದೇವತೆಗಳಿಗೆ ಕೊಡುವ ತರ್ಪಣ)
ತುಕ್ಕಿಸು : ದೋಷಪೂರ್ಣಮಾಡು
ತುತಿಸಿ : ಸ್ತುತಿಸಿ, ಹೊಗಳಿ
ತುರಂಗವದನ : ಕುದುರೆಯ ಮುಖದ, ಹಯವದನ
ತುರುಹಿಂಡು : ಆಕಳಹಿಂಡು
ತುರುಕರು ; ಆಕಳಕರು
ತೆತ್ತೀಸಕೋಟಿ : ಮೂವತ್ತು-ಮೂರು ಕೋಟಿ
ತೊಂಡ : ದಾಸ, ಸೇವಕ

ತೊಣಸಿ : ಉಣ್ಣೆ, ಕೆಚ್ಚಲನ್ನು ಹೀರುವ ಕ್ರಿಮಿ
ತೊತ್ತು : ಆಳು, ಸೇವಕಿ
ತೋರ : ದೊಡ್ಡ
ತೃಣಕಾಷ್ಟ : ಹುಲ್ಲು, ಕಟ್ಟಿಗೆ
ತ್ರಯನೇತ್ರ : ಮೂರುಕಣ್ಣುಳ್ಳವ, ಶಿವ
ತ್ರಾಣವಂತ : ಬಲವಂತ
ತ್ರಿದಶ : ದೇವತೆ
ತ್ರಿವಿಧ ಜೀವರು : ಸಾತ್ವಿಕ, ರಾಜಸ, ತಾಮಸ ಜೀವಿಗಳು
ದಂತ : ಹಲ್ಲು
ದಂಪತ್ತು : ದಂಪತಿ
ದಲ್ಲಣ : ತಲ್ಲಣ, ಭಯ
ದಾಶರಥಿ : ದಶರಥನ ಮಗ, ಶ್ರೀರಾಮ
ದಾಸ್ಯ : ಸೇವಕತನ
ದಾಯಾದಿ : ರಕ್ತಸಂಬಂಧಿ, ಆಸ್ತಿಯಲ್ಲಿ ಪಾಲುದಾರ
ದಿಗಂಬರ : ದಿಕ್ಕುಗಳೇ ಬಟ್ಟೆಯಾಗಿ ಉಳ್ಳವ, ನಗ್ನ
ದಿತಿಸುತರು : ದಿತಿಯ ಮಕ್ಕಳು–ದೈತ್ಯರು
ದುರಿತ : ಪಾಪ
ದುರುಳ : ದುಷ್ಟ
ದುರ್ಯೋನಿ : ಕೆಟ್ಟ ಜನ್ಮ
ದುಷ್ಕಾಲ : ಕೆಟ್ಟಕಾಲ
ದ್ವಯ : ಎರಡು
ದ್ವಾರ : ಬಾಗಿಲು
ದ್ವಿವಿಧ : ಎರಡು ರೀತಿ
ದ್ಯುಣುಕ : ಜಪಮಾಲೆ
ದ್ಯುಮಣಿ : ಸೂರ್ಯ
ಧನ್ವಂತರಿ : ದೇವ ವೈದ್ಯ
ಧವಳ : ಬಿಳಿಯಬಣ್ಣದ
ಧಾಮ : ನಿವಾಸಸ್ಥಾನ. ಮನೆ
ಧೀ : ಬುದ್ಧಿ
ಧುರ : ಯುದ್ಧ
ಧೇನಿಸು : ನೆನಪಿಸಿಕೋ, ಸ್ಮರಿಸು
ನಂದನ : ಮಗ
ನಂದತೀರ್ಥರು : ಮಧ್ವಾಚಾರ್ಯರು
ನಖ : ಉಗುರು
ನಗವೈರಿ : ಪರ್ವತಗಳವೈರಿ, ಇಂದ್ರ
ನರನರಸಿ : ಅರ್ಜುನನ ಹೆಂಡತಿ ದ್ರೌಪದಿ
ನರಸಿಂಗ : ನರಸಿಂಹ
ನವರತುನ : ನವರತ್ನ
ನವನವ : ಹೊಚ್ಚಹೊಸ, ನವೋನವ
ನವನೀತ : ಬೆಣ್ಣೆ
ನಾಭಿ : ಹೊಕ್ಕುಳು
ನಿಕರ : ಗುಂಪು, ಸಮೂಹ
ನಾಸಿಕ : ಮೂಗು
ನಿಖಿಳಕಥೆ : ಭಾಗವತ ಕಥೆ

ನಿಗಮಾವಳಿ : ವೇದಗಳ ಸಮೂಹ
ನಿಗ್ರಹಿಸು : ಹತೋಟಿಯಲ್ಲಿಡು
ನಿಜಕಳತ್ರದಿ ದ್ರೋಹ : ತನ್ನ ಹೆಂಡತಿಯಲ್ಲಿ ದ್ರೋಹ
ನಿಟಿಲ : ಹಣೆ
ನಿಬ್ಬಿಡಿ : ನಿರ್ಭಿಡೆ, ದಾಕ್ಷಿಣ್ಯರಹಿತ
ನಿರಯ : ದುಃಖ
ನಿರ್ಜರರು : ಮುಪ್ಪಿಲ್ಲದವರು- ದೇವತೆಗಳು
ನಿರ್ಜರತತಿ : ದೇವತೆಗಳ ಸಮೂಹ
ಕಾಶಿಕುಠಾರ : ಹರಿತವಾದ ಕೊಡಲಿ
ನಿಶೆ : ಕತ್ತಲು
ನಿಶ್ಚೇಷ್ಟ : ಜೀವವಿಲ್ಲದ
ನೀಚಯೋನಿ : ಕೀಳುಜನ್ಮ
ನೀರುಳ್ಳಿ : ಉಳ್ಳೇಗಡ್ಡೆ
ನೀಲಲೋಹಿತ : ನೀಲವರ್ಣದ ಕುತ್ತಿಗೆ ಉಳ್ಳವ, ಶಿವ
ನುತಿಸು : ಸ್ತುತಿಸು, ಹೊಗಳು
ನೇಣ : ಹಗ್ಗ
ನೃಪ : ರಾಜ
ಪಂಕಜ : ಕೆಸರಿನಲ್ಲಿ ಹುಟ್ಟಿದುದು, ಕಮಲ
ಪಂಕಜನೇತ್ರೆ : ಕಮಲದಂತೆ ಸುಂದರವಾದ ಕಣ್ಣುಗಳುಳ್ಳವಳು
ಪಂಕಜಮುಖಿ : ಕಮಲದಂತೆ ಸುಂದರವಾದ ಮುಖವುಳ್ಳವಳು
ಪತಿತವಾದ : ಪಾಪಿಷ್ಠವಾದ
ಪಥ : ಹಾದಿ
ಪದುಮಜಾಂಡ : ಬ್ರಹ್ಮಾಂಡ
ಪನ್ನಗ : ಹಾವು
ಪಯೋನಿಧಿ : ಸಮುದ್ರ
ಪರಿವ : ಹರಿವ
ಪರಿಚಾರ : ಸೇವಕ
ಪರ್ವಣಿ : ಪರ್ವಕಾಲ
ಪವಮಾನಮತ : ವಾಯುಮತ, ಮಧ್ವಮತ
ಪಶುಗಾಪಿ : ಪಶುಗಳನ್ನು ಕಾಯುವವ
ಪಸವ : ಆಹಾರ
ಪಾಣಿ : ಕೈ
ಪಾತುಕಾಂಬುಧಿ : ಪಾಪವೆಂಬ ಸಮುದ್ರ
ಪಾಮರ : ಪಾಪಿ, ಅಸಂಸ್ಕೃತ
ಪಾರ್ಥ : ಅರ್ಜುನ
ಪಾಲಸಾಗರ : ಹಾಲ್ಗಡಲು
ಪಾಲ್ಗೊಡ : ಹಾಲ್ಗೊಡ, ಹಾಲಿನ ಕೊಡ
ಪಾವಕ : ಅಗ್ನಿ, ಬೆಂಕಿ
ಪಾವನ : ಪುಣ್ಯತಮ
ಪೀಯೂಷಿ : ಅಮೃತ
ಪುಸಿ : ಹುಸಿ, ಸುಳ್ಳು
ಪೂರ್ಣಪ್ರಜ್ಞ : ಮಧ್ವಾಚಾರ್ಯರು
ಪೆತ್ತ : ಹೆತ್ತ

ಪೊಂಗೊಳಲು : ಹೊನ್ನಿನಕೊಳಲು, ಬಂಗಾರದ ಕೊಳಲು
ಪೊಂದು : ಹೊಂದು
ಪೊಟ್ಟೆಪೊರೆ : ಹೊಟ್ಟೆಹೊರೆ, ಹೊಟ್ಟೆ ತುಂಬಿಕೊಳ್ಳು
ಪೊಳಲ್ : ಪಟ್ಟಣ
ಪೋಗಾಗಿ : ಹೊರಗಾಗಿ, ಮುಟ್ಟಾಗಿ
ಪೋಪುದು : ಹೋಗುವುದು
ಫಣಿ : ಹಾವು, ಹಣೆ
ಫುಲ್ಲನಾಭ : ನಾಭಿಯಲ್ಲಿ (ಹೊಕ್ಕುಳಲ್ಲಿ) ಕಮಲವುಳ್ಳವ
ಪ್ರಣತನಾಗದ : ಬಾಗದ, ನಮಸ್ಕರಿಸದ
ಪ್ರಣವಾಕಾರ : ಓಂಕಾರಸ್ವರೂಪ
ಪ್ರಾವರ್ತನ : ಬಿಂಕ
ಪ್ರಹರ : ಮೂರುತಾಸು
ಪ್ರಾಪುತ : ಪ್ರಾಪ್ತ, ಒದಗಿದ
ಬಂಟ : ನಂಬಿಗಸ್ತನಾದ ಸೇವಕ, ಶೂರ
ಬಕ್ಕದಾಸ : ಬಾಯದಾಸ
ಬಗೆ : ರೀತಿ
ಬಣಗು : ಕ್ಷುದ್ರ, ಕೀಳು
ಬವಣೆ : ಕಷ್ಟ, ತೊಂದರೆ
ಬಾಹ : ಬರುವವ
ಬಿನುಗು : ಕ್ಷುದ್ರ
ಬಿಸಜಸಂಭವ : ಬ್ರಹ್ಮ
ಬೊಬ್ಬುಳಿ : ಗುರುಳಿ, ಗುಳ್ಳೆ
ಭವಬೀಜ : ಹುಟ್ಟುಸಾವಿನ ಚಕ್ರ
ಭವಾಬ್ಧಿ : ಸಂಸಾರಸಾಗರ
ಭೀಷಣ : ಭಯಂಕರ
ಭುಕುತಿ : ತಿನ್ನುವದು
ಭುಜಗ : ಹಾವು
ಭೂರುಹ : ಭೂಮಿಮೇಲೆ ಬೆಳೆಯುವದು, ಗಿಡ
ಭೃಂಗ : ಗುಂಗೀಹುಳು, ತುಂಬಿ
ಭೃತ್ಯತನ : ಸೇವಕತನ
ಭೃತ್ಯವತ್ಸಲ : ಸೇವಕರಲ್ಲಿ ಪ್ರೇಮವುಳ್ಳವ
ಭೈರವನದಾಡೆ : ಭಯಂಕರ ಸನ್ಯಾಸಿಯು ಗಡ್ಡ
ಭೈಷ್ಮಿ : ಭೀಷ್ಮಕರಾಜನ ಮಗಳಾದ ರುಕ್ಮಿಣಿ
ಭೋಗಿಭೂಷಣ : ಹಾವುಗಳನ್ನು ಒಡವೆಗಳಾಗಿ ಇಟ್ಟುಕೊಂಡವ, ಶಿವ
ಮಂಥಣಿ : ಕಡಗೋಲು
ಮಂದಾಕಿನಿ : ಗಂಗಾನದಿ
ಮುಕುಟ : ಕಿರೀಟ
ಮಖ : ಯಜ್ಞ
ಮಗುಳು : ಚಿಗುರು, ಮೊಗ್ಗು
ಮಥಿಸು : ಕಡೆ
ಮದಡ : ಮಂಕ, ಅಜ್ಞಾನಿ

ಮಧುಪೆ : ಜೇನುತುಪ್ಪ ಸೇವಿಸು-
ವವಳು, ಮಕರಂದ ಸವಿಯುವವಳು
ಮನಸಿಜನಯ್ಯ : ಕಾಮನ ತಂದೆ,
ವಿಷ್ಣು
ಮರಕತ : ಪಚ್ಚೆ (ಹಸರುರತ್ನ)
ಮರ್ಕಟ : ಮಂಗ
ಮರಿಯಾದೆ : ಮರ್ಯಾದೆ
ಮರುತಮತ : ಮಧ್ವಾಚಾರ್ಯರ
ಮತ, ದ್ವೈತಮತ
ಮಹಾದುರಿತ : ದೊಡ್ಡಪಾಪ
ಮಸ್ತಕ : ತಲೆ
ಮಹೋದಧಿ : ಮಹಾಸಮುದ್ರ
ಮಾರಜನಕ : ಕಾಮನ ತಂದೆ,
ವಿಷ್ಣು
ಮಾತುಳ (ಲ) : ಸೋದರಮಾವ
ಮಿಕ್ಕ : ಹೆಚ್ಚಿನ
ಮಸುಣಿ (ನಿ) : ಬಂಗಾರ
ಮಿಳಿತಾಗಿ : ಕೂಡಿ
ಮಿತ್ರಘ್ನ : ಮಿತ್ರನಿಗೆ ದ್ರೋಹ
ಬಗೆಯುವದು
ಮೀನಕೇತನ : ಮೀನನ್ನು ಧ್ವಜ
ಚಿಹ್ನವಾಗಿ ಉಳ್ಳವ, ಕಾಮ
ಮುಂಜೆರಗು : ಸೆರಗಿನ ತುದಿ
ಮುನಿಕಾಣ್ವ : ಕಣ್ವಮುನಿಗಳು
ಮೂಷಕಗಮನ : ಗಣಪತಿ
ಮೃಗಾಂಕ : ಚಂದ್ರ
ಮೃತ್ತಿಕಿ (ಕೆ) : ಮಣ್ಣು

ಮೇದಿನಿ : ಭೂಮಿ
ಮೋದತೀರ್ಥರು : ಮಧ್ವಾಚಾ-
ರ್ಯರು
ಮ್ಲಾನ : ಬಾಡಿದ, ಕುಂದಿದ
ಯಂತ್ರೋದ್ಧಾರಕ : ವಾಯು-
ದೇವರು
ಯತಿ : ಮಧ್ವಾಚಾರ್ಯರು
ಯದುಕುಲೇಶ : ಯಾದವಕುಲದ
ಒಡೆಯ, ಶ್ರೀಕೃಷ್ಣ
ಯಾಚಕ : ಬೇಡುವವ, ಭಿಕ್ಷುಕ
ಯುಗಳ : ಯುಗ್ಮ, ಜೋಡಿ
ಯುವ : ಯೌವನ, ಹರೆಯ
ರತಿಪತಿ : ಕಾಮ
ರತಿಪತಿಪಿತ : ಕಾಮನ ತಂದೆ,
ವಿಷ್ಣು
ರದನ : ಹಲ್ಲು
ರಮೆ–ಧರೆ : ಶ್ರೀದೇವಿ ಮತ್ತು
ಭೂದೇವಿ
ರಾಜೀವದಳನಯನ : ಕಮಲದ
ದಳದಂತಹ ಕಣ್ಣುಗಳುಳ್ಳವ
ರಾಯ : ರಾಜ
ರಿಪು : ವೈರಿ
ರೇಣು : ಧೂಳಿ
ರೇವತಿರಮಣ : ಬಲರಾಮ
ಲಂಬೋದರ : ದೊಡ್ಡ ಹೊಟ್ಟೆ-
ಯುಳ್ಳವ, ಗಣಪತಿ
ಲವ : ಸ್ವಲ್ಪ

ಲಾಘವ : ಸೇವೆ, ಕಿರಿದಾದ
ಲೆಂಕ : ಸೇವಕ
ವಟ : ಆಲದಗಿಡ
ವನಧಿ : ಸಮುದ್ರ
ವನಜಭವ : ಬ್ರಹ್ಮ
ವನಜಪೀಠ : ಕಮಲಾಸನ, ಬ್ರಹ್ಮ
ವರಹಜತೀರ : ತುಂಗಾತೀರ
ವರುಷ : ವರ್ಷಾ, ಮಳೆ
ವಸನ : ವಸ್ತ್ರ
ವಸ್ತ್ರ : ಒಡವೆ
ವಸುಧೆ : ಭೂಮಿ
ವಾಜಿ : ಕುದುರೆ
ವಾತನೊಡಿಯ : ವಾಯುವಿನ ಯಜಮಾನ, ರಾಮ
ವಾಯುಮತ : ಮಧ್ವಮತ
ವಾರಣ : ಸರೋವರದ ದಂಡೆ
ವಾರಿಧಿಯ ಮಾನಭಂಗ : ಸಮುದ್ರ-ವನ್ನುಲ್ಲಂಘಿಸುವದು
ವಾರುತಿ : ವಾರ್ತೆ, ಸುದ್ದಿ
ವಿತ್ತ : ಸಂಪತ್ತು
ವಿಧಾತೃ : ಬ್ರಹ್ಮ
ವಿರಂಚಿ : ಬ್ರಹ್ಮ
ವಿರಕುತಿ : ವಿರಕ್ತಿ
ವಿಪ್ರ : ಬ್ರಾಹ್ಮಣ
ವಿಹ್ವಲ : ಹತಾಶ
ವೃಂದ : ಸಮೂಹ
ವೃಷಭ : ಎತ್ತು, ನಂದಿ
ವೇಣಿ : ಹೆರಳು, ಜಡೆ
ವೇದೋಕ್ತ : ವೇದದಲ್ಲಿ ಹೇಳಿದಂತೆ
ವ್ರಾತ : ಸಮೂಹ
ಶರನಿಧಿ : ಸಮುದ್ರ
ಶಶಿಮಂಡಲ : ಚಂದ್ರಮಂಡಲ
ಶಶಿಮುಖಿ : ಚಂದ್ರನಂತೆ ಸುಂದರ ಮುಖವುಳ್ಳವಳು
ಶಶಿಕುಲೋದ್ಭವ : ಚಂದ್ರವಂಶದಲ್ಲಿ ಹುಟ್ಟಿದವ
ಶಾಖಾ : ತುಳಸಿ
ಶಾಲ್ಯೋದನ : ಪರಮಾನ್ನ
ಶುಂಠ : ಅಜ್ಞಾನಿ, ದಡ್ಡ
ಶ್ರವಣ : ಕೇಳುವದು
ಶ್ರೀಮದಾಚಾರ್ಯರು : ಶ್ರೀಮಧ್ವಾಚಾರ್ಯರು
ಶ್ರೀಮದಾನಂದತೀರ್ಥರು : ಶ್ರೀ ಮಧ್ವಾ-ಚಾರ್ಯರು
ಶ್ರೀವತ್ಸ : ವಿಷ್ಣುವಿನ ಎದೆಯ ಮೇಲಿನ ಚಿಹ್ನ
ಶ್ರೀಯ : ಕೀರ್ತಿ
ಶೇಷ : ಉಳಿದ
ಶ್ಲಾಘನ : ವರ್ಣನ
ಸಂಕಾಶ : ಕಾಂತಿ, ಹೊಳಪು
ಸಂಚಿತ : ಸಂಗ್ರಹಿತ
ಸಂಸರ್ಗ : ಸಂಬಂಧ
ಸಂಹೃತಿ : ಆಹಾರ
ಸಖತನ : ಗೆಳೆತನ

ಸತ್ ಶ್ರವಣ : ಒಳ್ಳೆಯದನ್ನು ಕೇಳುವದು
ಸತ್ತಿಗೆ : ಛತ್ರ, ಬೆಳ್ಗೊಡೆ
ಸ್ತವನ : ಸ್ತುತಿ, ಹೊಗಳಿಕೆ
ಸತ್ಯವತಿಸೂನು : ವ್ಯಾಸಮುನಿಗಳು
ಸದನ : ಮನೆ
ಸ್ಮರ : ಕಾಮ
ಸಹಭವ : ಒಡಹುಟ್ಟಿದವ, ಅನುಜ
ಸಾಗರತಲ್ಪ : ವಿಷ್ಣು
ಸಾಮವಿಲೋಲ : ಸಾಮವೇದದಿಂದ ಹೊಗಳಿ ಹಾಡಲ್ಪಟ್ಟವ
ಸಾಮಾತಿ : ಮಲತಾಯಿ
ಸಾಸಿರ : ಸಾವಿರ
ಸಿಂಗ (ದ್ಭ) : ಸಿಂಹ (ತ್ಸ)
ಸಿಂಧು : ಸಮುದ್ರ
ಸುಜನರು : ಒಳ್ಳೇಜನರು
ಸುಧಾಪಾನ : ಅಮೃತಪಾನ
ಸುಧೆ : ಅಮೃತ
ಸುನಾಸಾ : (ಸು+ನಾಸಾ) ಒಳ್ಳೆಯ ನೀಟಾದ ಮೂಗು
ಸುಮ್ಮನಸರು : ಸುಮನಸರು, ದೇವತೆಗಳು
ಸುಮೇರು : ಒಂದು ಪರ್ವತ
ಸುರರಂಗನಿ(ನೆ)ಯರು : ದೇವತಾ ಸ್ತ್ರೀಯರು
ಸುರಕುಲ : ದೇವತಾಕುಲ
ಸುರತರು : ಕಲ್ಪವೃಕ್ಷ, ದೇವವೃಕ್ಷ
ಸುರಸೈನ್ಯ ನಾಯಕ : ಪರಮೇಶ್ವರ
ಸುರನದಿ : ಗಂಗಾನದಿ
ಸೂಕರ : ವರಾಹ, ಹಂದಿ
ಸ್ಥೂಲ : ದೊಡ್ಡ
ಸೇವ್ಯ : ಸೇವೆಯನ್ನು ಸ್ವೀಕರಿಸುವ
ಸೋಮ : ಚಂದ್ರ
ಸೋಪಾನ : ಪಾವಟಣಿಗೆ
ಸೋಹಂ : ನಾನೇ ಅವನು-ದೇವನು ನಾನು ಎಂಬ ಅದ್ವೈತ ಭಾವ
ಹಂಸವಾಹನ : ಬ್ರಹ್ಮ
ಹದುಳ : ಕ್ಷೇಮ
ಹರವಿ : ದೊಡ್ಡಗಡಿಗೆ, (ಮಣ್ಣಿನಪಾತ್ರೆ)
ಹರಿಣಾಂಕ ನಿಭವಕ್ತ್ರ : ಚಂದ್ರ-ನಂತೆ ಬೆಳಕುಳ್ಳ ಮುಖದವನು
ಹರಿಪಾದೋದಕ : ಗಂಗಾನದಿ
ಹಸ್ತಕಂಕಣ : ಕೈ ಬಳೆ
ಹೀರಕಾಂಚಿ : ಬಂಗಾರದ ಡಾಬು, ಉಡುದಾರ
ಹುತ : ಹವಿಸ್ಸು, ಪ್ರಜ್ವಲವಾಗು, ಸಿಟ್ಟುಬೆಂಕಿಯಾಗು
ಹೂಳಿ : ಹುಗಿದು
ಹೃದವು : ಹೃದಯವು

ಹೇಮಾತುರ : ಬಂಗಾರದ ಆಸೆಯುಳ್ಳವ, ದುಡ್ಡಿನ ಲೋಭವುಳ್ಳವ
ಹೇಮಾಂಬರಧರ : ಬಂಗಾರದ ಬಣ್ಣವುಳ್ಳ ಬಟ್ಟೆ ತೊಟ್ಟವ
ಹೊಯಿಲು : ಹೊಯ್ಲು, ಮೊರೆ
ಕ್ಷತಿ : ನೋವು, ನಷ್ಟ
ಕ್ಷಯ : ನಾಶ
ಕ್ಷಿತಿ : ಭೂಮಿ
ಕ್ಷಿತಿಪ : ಭೂಪಾಲ, ರಾಜ
ಕ್ಷೀರಾಂಬುಧಿ : ಹಾಲ್ಗಡಲು
ಕ್ಷೀರವಾರಿಧಿ : ಹಾಲಿನಸಮುದ್ರ
ಕ್ಷುಧಾತುರ : ಹಸಿವೆಯಿಂದ ವ್ಯಾಕುಲನಾದವ

++++++++

# ನಮ್ಮ ಇತ್ತೀಚಿನ ಪ್ರಕಟಣೆಗಳು

| | | |
|---|---|---|
| ಂಕಿಯ ಮಗಳು | —ಸತ್ಯಕಾಮ | ೫ |
| ಲೆಗಾರರ ಕತೆಗಳು | —ಬಿ. ಪಿ ಬಾಯರಿ | ೪ |
| ುನುಸ್ಮೃತಿ (ದ್ವಿ. ಮು.) | —ಅನು: ಚ. ಈಶ್ವರಶಾಸ್ತ್ರೀ | ೨೦ |
| ಾಗತಿಕ ಧರ್ಮಗಳು | —ಎಸ್. ಆರ್. ನವರತ್ನ | ೧೫ |
| ುರಂದರದಾಸರ ಹಾಡುಗಳು | —ಸಂ. ಕಾವ್ಯಪ್ರೇಮಿ | ೬ |
| ಗನ್ನಾಥದಾಸರ ಹಾಡುಗಳು | ” | ೪ |
| ೋಪಾಲದಾಸರ ಹಾಡುಗಳು | ” | ೩ |
| ್ರಸನ್ನವೆಂಕಟದಾಸರ ಹಾಡುಗಳು | ” | ೪ |
| ಂಸ್ಕೃತ ಕನ್ನಡ ವ್ಯುತ್ಪತ್ತಿಕೋಶ | —ಚಿಂತಾಮಣಿ ಪೇಠಕರ | ೪ |
| ರ್ನಾಟಕದ ಸಾಂಸ್ಕೃತಿಕ ಪರಂಪರೆ | —ಡಾ॥ ರಂ. ಶ್ರೀ. ಮುಗಳಿ | ೧೦ |
| ೀರಯೋಗಿ ಸ್ವಾಮಿ ವಿವೇಕಾನಂದ | —ರೊಮೆರೊಲಾ | ೬ |
| ುಹಾಕವಿ ರನ್ನ | —ಶೋಭಾ ಕಟ್ಟಿ | ೪ |
| ಾಹಿತ್ಯದಲ್ಲಿ ತತ್ತ್ವವಾದಗಳು | —ಪಿ. ವಿ. ಶಾಸ್ತ್ರಿ | ೫ |
| ್ರೈನಧರ್ಮ ಪರಿಭಾಷೆ | —ಮ. ಪ್ರ. ಪೂಜಾರ | ೫ |
| ಾಧವಕರುಣಾವಿಲಾಸ | —ಗಳಗನಾಥ | ೨೫ |
| ಕನ್ನಡ ಭಾಷಣಕಲೆ | —ಎನ್ಕೆ | ೮ |
| ಅಂಗುಷ್ಠದಿಂದ ಅದೃಷ್ಟ | —ಆರ್. ಜಿ. ರಾವ್ | ೮ |
| ಹಾಸ್ಯರಸಾಯನ | —ನಗೆಹನಿಗಳ ಬೃಹತ್ ಸಂಗ್ರಹ | ೭ |
| ಚೂಡಾರತ್ನಶತಕ | —ಸಂ. ರಂಗಸ್ವಾಮಿ | ೧ |
| ್ಯೆನೀ ಸತ್ತಾಗ ನಾನ್ಯಾಕ ಅತ್ತ | —ರಾಮಚಂದ್ರ ಕೊಟ್ಟಲಗಿ | ೪ |
| ದ್ರಾವಿಡಭಾಷೆಗಳ ಸಾಹಿತ್ಯಚರಿತ್ರೆ | —ಗದಗಕರ | ೧ |
| ಗ್ರೀಕ್ ರೋಮನ್ ಸಾಹಿತ್ಯಚರಿತ್ರೆ | ” | ೧ |
| ಫ್ರೆಂಚ್ ಸಾಹಿತ್ಯಚರಿತ್ರೆ | ” | ೩ |
| ಸಂಸ್ಕೃತ-ಪರ್ಶಿಯನ್ ಸಾಹಿತ್ಯಚರಿತ್ರೆ | ” | ೩ |

